

ಶ್ರೀರಾಘವಂ ದಶರಥಾತ್ಮಜಮಪ್ರಮೇಯಂ
ಸೀತಾಪತಿಂ ರಘುಕುಲಾನ್ವಯ ರತ್ನದೀಪಮ್ ॥
ಆಜಾನುಬಾಹುಮರವಿಂದದಲಾಯತಾಕ್ಷಂ
ರಾಮಂ ನಿಶಾಚರ ವಿನಾಶಕರಂ ನಮಾಮಿ ॥

ಶ್ರೀರಾಘವನೂ, ದಶರಥನ ಮಗನೂ, ಅಪ್ರಮೇಯನೂ, ಸೀತಾಪತಿಯೂ, ರಘುಕುಲಕ್ಕೆ ರತ್ನದೀಪದಂತಿರುವನೂ ಆಜಾನುಬಾಹುವೂ, ಅರವಿಂದದಳದಂತೆ ವಿಶಾಲವಾದ ಕಣ್ಣುಗಳನ್ನುಳ್ಳವನೂ, ರಾಕ್ಷಸರ ವಿನಾಶಕಾರಿಯೂ–ಆದ ಶ್ರೀರಾಮನನ್ನು ನಮಸ್ಕರಿಸುತ್ತೇನೆ

ಸಂದರ್ಶಿಸಿ ಆನಂದಿಸಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ವಾರ್ಷಿಕ ಬ್ರಹ್ಮೋತ್ಸವ

**15-5-86 ರಿಂದ 24-5-86 ವರೆಗೆ**

| | | |
|---|---|---|
| 16–5–86 | ಶುಕ್ರವಾರ | ಧ್ವಜಾರೋಹಣ |
| 20–5–86 | ಮಂಗಳವಾರ | ಗರುಡವಾಹನ |
| 21–5–86 | ಬುಧವಾರ | ಹನುಮದ್ವಾಹನ |
| 23–5–86 | ಶುಕ್ರವಾರ | ರಥೋತ್ಸವ. |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆ ವಿವಿಧ ವಾಹನೋತ್ಸವಗಳು ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುವುವು. ಶ್ರೀ ಗೋವಿಂದರಾಜಸ್ವಾಮಿ ದೇವಾಲಯ ತಿರುಪತಿಯ ಬಸ್, ರೈಲು ನಿಲ್ದಾಣಗಳ ಬಳಿಯಲ್ಲೇ ಇದೆ.

ತಿರುಮಲೆ ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.

---

ಸಂದರ್ಶಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ನಾರಾಯಣವನಂ

## ವಾರ್ಷಿಕ ಬ್ರಹ್ಮೋತ್ಸವ

**ದಿನಾಂಕ 20-5-86 ರಿಂದ 29-5-86 ರ ವರೆಗೆ**

| | | |
|---|---|---|
| 21–5–86 | ಬುಧವಾರ | ಧ್ವಜಾರೋಹಣ |
| 25–5–86 | ಭಾನುವಾರ | ಗರುಡವಾಹನ |
| 26–5–86 | ಸೋಮವಾರ | ಹನುಮದ್ವಾಹನ |
| 28–5–86 | ಬುಧವಾರ | ರಥೋತ್ಸವ. |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆ ವಿವಿಧ ವಾಹನೋತ್ಸವಗಳೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುವುವು. ನಾರಾಯಣವನಂ ತಿರುಪತಿಯಿಂದ 30 ಕಿಲೋ ಮೀ. ದೂರದಲ್ಲಿದ್ದು ವಿಶೇಷ ಬಸ್ ಅನುಕೂಲವಿರುತ್ತದೆ. ಹೆಚ್ಚಿನ ವಿವರಗಳಿಗೆ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ತಿರುಮಲೆ – ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು:
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೬] ಏಪ್ರಿಲ್ ೧೯೮೬ [ಸಂಚಿಕೆ ೧೧


# ವಿಷಯಸೂಚಿ



ಮುಖಚಿತ್ರ : ದಶಾವತಾರದ ನವಗ್ರಹಾಧಿಪತ್ಯ ಚಿತ್ರ – ಕೆ ಜಗದೀಶ್.

ಹಿಂಬದಿಯಲ್ಲಿ : ಅಲಿಪಿರಿಯ ಈಚಿನ ಒಂದು ನೋಟ.

ಒಳಗಡೆ : ಸರಿಪಲ್ಲಿಯಲ್ಲಿ ತಿ ತಿ.ದೇ. ಕಲ್ಯಾಣಮಂಟಪ, ವೇದಪಾಠಶಾಲೆಯ ಉದ್ಘಾಟನೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮರಾವ್, ಹಾಗೂ ತಿರುಮಲೆಯಲ್ಲಿ ಮೊದಲಬಾರಿಗೆ ರಾಜ್ಯಪಾಲಿಕೆ ಶ್ರೀಮತಿ ಕುಮುದ್‌ಬೆನ್ ಜೋಷಿ.




‘ಧಾತಾ ಯಥಾಪೂರ್ವ ಮಕಲ್ಪಯತ್’–ಬ್ರಹ್ಮ ಮೊದಲಿನಂತೆಯೇ ಸೃಷ್ಟಿಸಿದ ಎನ್ನುವುದು ಇಲ್ಲಿಯ ಭಾವ. ನಿಜವೆಂದರೆ ವಿಶ್ವಪರಿಣಾಮ ಚರಿತ್ರೆಯೆಲ್ಲ ಇದರಲ್ಲಡಗಿದೆಯೆನ್ನಬಹುದು. ಎಷ್ಟು ದಿನ, ವರ್ಷಗಳುರುಳಿದರೂ ದೃಶ್ಯಾದೃಶ್ಯಮಾನವಾದ, ಆಚಂದ್ರತಾರಕವಾದ ಈ ಸಮಸ್ತ ಜಗತ್ತೂ ನಶ್ವರವೇ ಎಂದೂ, ಪ್ರಭವ ಪ್ರಳಯಗಳ ನಡುವೆ ಪರಿಭ್ರಮಣೆ ಮಾತ್ರವೆಂದೂ ನಿರೂಪಿತವಾಗುತ್ತದೆ.

ಅಷ್ಟೇ ಅಲ್ಲ; ವಿಶ್ವಧರ್ಮಗಳೂ ಕೂಡ ಬದಲಾಯಿಸುವುದಿಲ್ಲವಂತೆ. ತತ್ಕಾಲೀನ ಸ್ವಲ್ಪ ವ್ಯತ್ಯಾಸವಲ್ಲದೆ ಸ್ಥೂಲ ಧರ್ಮಗಳಲ್ಲಿ ಪರಿವರ್ತನೆಯಿಲ್ಲವಂತೆ. ಮನುಷ್ಯನ ಮತಿಯಲ್ಲೂ ಮಿತಿಯಲ್ಲೂ ಎಷ್ಟು ಯುಗ ಕಳೆದರೂ ಬದಲಾವಣೆಯಾಗವಂತೆ.

ಮಣ್ಣಲ್ಲೇ ಹುಟ್ಟಿದರೂ ಮಣ್ಣು ಚಿನ್ನ ಒಂದಲ್ಲವೆಂಬಂತೆ ಜೀವಧರ್ಮಗಳ ಒಳಿತುಕೆಡಕುಗಳೂ ಬದಲಾಗದಂತೆ. ಯುಗ ಯುಗಕ್ಕೊಮ್ಮೆ ಮಹಾಯುದ್ಧ ನಡೆಯುವುದು ಚರಿತ್ರೆಯ ಗತಿಬಿಡದು ಎಂಬುದಕ್ಕೆ ನಿದರ್ಶನ. ಎಲ್ಲ ಒಳಿತೇ ಎಂಬ ಕೃತಯುಗವನ್ನು ಹೊರತುಪಡಿಸಿದರೆ, ಮಾರಣ ದುರ್ಮೇಧಕ್ಕೆ ಮತ್ತಷ್ಟು ಸಾಣೆ ಹಿಡಿದು, ಅಧಿಕ ಜನಕ್ಷಯವನ್ನುಂಟುಮಾಡಿದ ತ್ರೇತಾಯುಗದ ರಾಮರಾವಣಯುದ್ಧ, ದ್ವಾಪರದ ಕುರುಕ್ಷೇತ್ರಯುದ್ಧ ನಮ್ಮ ಕಲಿಯುಗದಲ್ಲಿ ಎರಡು ಪ್ರಪಂಚಯುದ್ಧಗಳು ನಡೆದು ಮೂರನೆಯದು ಮನೆಯಂಗಳಕ್ಕೆ ಬರುತ್ತಿದೆ. ಈ ಹೊತ್ತಿಗೆ 28 ಮಹಾಯುಗಗಳು ಆದುವಂತೆ. ಎಂದರೆ ಹೆಸರಿನ ವ್ಯತ್ಯಾಸ ಬಿಟ್ಟರೆ ಪ್ರಕೃತಿ ಪ್ರವೃತ್ತಿ ಪುನರಾವರ್ತಿಸುತ್ತಿದೆಯೆಂದಾಯಿತು. ವಿಶ್ವಕರ್ಮ ಧರ್ಮಗಳೂ ಇವೇಯೇನೊ!

ತ್ರಿಗುಣಗಳಲ್ಲಿ ಸ್ವಲ್ಪ ಮಾತ್ರದ ವ್ಯತ್ಯಾಸದ ಹೊರತು ಹಿರಿಯ ಭೇದವುಂಟಾಗದಂತಹ ಕೀಲು ವಿಶ್ವಚಕ್ರವನ್ನು ನಡೆಸುತ್ತಿದೆ. ಎಂತಲೇ ಬ್ರಹ್ಮನೂ ಜನನ ಮರಣಾತ್ಮಕ ಜೀವನಚಕ್ರವನ್ನು ಯಥಾ ಪೂರ್ವದಂತೆ ನಿರ್ಮಿಸಿ ನಿರ್ವಹಿಸುತ್ತಿದ್ದಾನೆ ಎಂಬುದರಲ್ಲಿ ಅಚ್ಚರಿ ಸಾಸಿವೆಯಷ್ಟೂ ಕಂಡುಬರದು.

ಒಂದು ಪ್ರಳಯದ ನಂತರ ನಡೆದ ಪ್ರಭವವನ್ನು ಯುಗಾದಿ ಎಂದರು. ಹೀಗೆ ಹಲವು ಯುಗಗಳ ಸಮೀಕೃತ ಕಾಲವನ್ನು ಮಹಾಯುಗವೆಂದರು. ಮಹಾಕ್ಷಯದ ನಂತರ ಯೋಗನಿದ್ರಾಮುದ್ರಿತ ನಿರಂಜನ ಹೃದಯ ಕಾಸಾರದಲ್ಲಿ ನೂತನ ಜೀವ ತರಂಗಗಳು ಪ್ರಬುದ್ಧವಾಗುತ್ತವೆ. ಪುಲಕಿಸಿದ ಆ ಮನಃಪ್ರಕೃತಿ ಪುನಃ ಪ್ರಭವಕ್ಕೆ ಕಾರಣವಾಗುತ್ತದೆ.

ದ್ವಾದಶ ಮಾಸಾತ್ಮಕವೂ, ಆರು ಋತುಯುಕ್ತವೂ ಆದ ವರ್ಷಚಕ್ರದಲ್ಲಿ ನಾವು ಆಚರಿಸುವ ಯುಗಾದಿ ಮಹಾಯುಗಾಂತರ ಯುಗಾದಿಯ ಅಂಶರೂಪ. ವಸಂತ ಶೋಭೆಯಿಂದ ರೋಮಾಂಚಗೊಂಡ ವಿಶ್ವಮಾತೆಯ ಮನ, ಶಿಶಿರದಲ್ಲಿ ಮುಕುಳಿತವಾಗಿ ಮತ್ತೊಂದು ವಸಂತದಲ್ಲಿ ಮಮತಾಮಧುಸ್ಯಂದಿಯಾಗುತ್ತದೆ. ಎಂತಲೇ ಅಂದು ಗತಸ್ಮೃತಿಯ ಕಹಿಯನ್ನು ಭಾವೀಸಿಹಿಯನ್ನು ವರ್ತಮಾನದ ಹುಳಿಯನ್ನು ಬೆರೆಸಿ ಪ್ರಸಾದವಾಗಿ ಸ್ವೀಕರಿಸುತ್ತೇವೆ.

ಈಗ ಬರುತ್ತಿದೆ–ಭಯಂಕರವಾಗಿರುವಂತೆ ಕ್ಷಯ ಸಂವತ್ಸರ. ಆದರೆ ಭಯಪಡಬೇಕಾದ್ದು ಏನಿಲ್ಲ. ಆಸ್ತಿಯಿಲ್ಲದವನಿಗೆ ನಾಸ್ತಿಯನ್ನು ಕುರಿತು ಚಿಂತೆ. ಮಾನವ ಮೌಲ್ಯಗಳಿಗೆ ಈ ಸಮಾಜದಲ್ಲಿ ಕ್ಷಯ ಹಿಡಿಯದಂತೆ ನೋಡಿಕೊಂಡರೆ ಸಾಕು, ಮಾನವನು ಮಾಧವನ ಹತ್ತಿರ ಸೇರಿದಂತೆಯೇ.

‘ಮತ್ತಃ ಸರ್ವಂ ಪ್ರವರ್ತತೇ’ ಎನ್ನುತ್ತ ಬೆಟ್ಟದ ಮೇಲೆ ಗರ್ಜಿಸುವ ಕಾಲಮೇಘ ಮಮತೆಯ ಅಮೃತ ವರ್ಷವನ್ನು ಹರಿಸಿ ಮನೋಹರವಾದ ಪ್ರಭವಕ್ಕೆ ದಾರಿ ಮಾಡಿಕೊಡುವುದೆಂದು ಆಶಿಸುವ.

# ಶ್ರೀರಾಮಚಂದ್ರ ಸುಪ್ರಭಾತಮ್

ಅನುಷ್ಟುಪ್

ಶ್ರೀರಾಮಚಂದ್ರದಯಿತೇ ಸೀತೇ ಜನಕನಂದಿನಿ ।
ಉತ್ತಮೇ ಸರ್ವನಾರೀಣಾಂ ಸುಪ್ರಭಾತಂ ಮದಂಬಿಕೇ ॥ ೧

ಕೌಸಲ್ಯಾ ಸುಪ್ರಜಾರಾಮ ಪೂರ್ವಾ ಸಂಧ್ಯಾ ಪ್ರವರ್ತತೇ ।
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ವಿಶ್ವಮಂಗಲಂ ॥ ೨

ವಸಂತತಿಲಕ



ಆಜಾನುಬಾಹುರರವಿಂದದಲಾಯತಾಕ್ಷಃ
ಕೋದಂಡಪಾಣಿರನುಜಾವನಿಜಾಸಹಾಯಃ ।
ಧ್ಯೇಯಃ ಸದಾ ಸಕಲಲೋಕ ಹೃದಂತರಾತ್ಮಾ
ರಾಮ ತ್ವಮೇವಶರಣಂ ತವ ಸುಪ್ರಭಾತಮ್ ॥ ೩

ವಾಕ್ಯಂ ಗುರೋರನುಸರನ್ ಕುಶಿಕಾತ್ಮಜಸ್ಯ
ಹತ್ವಾ ಸುಕೇತುತನಯಾ ಮನಯ ಪ್ರತಿಷ್ಠಾಮ್ ।
ಧರ್ಮಸ್ಯ ವೀರ ಜಯಮಾದ್ಯಮದರ್ಶಯಸ್ತ್ವಂ
ಶ್ರೀರಾಮಚಂದ್ರ ರಘುಪುಂಗವ ಸುಪ್ರಭಾತಂ ॥ ೪

ಯಜ್ಞಸ್ಯ ರಕ್ಷಣ ವಿಧಾವಥ ಗಾಧಿಸೂನೋಃ
ಅಸ್ತ್ರೇಣ ತೇ ಸದಹಿತೋ ನಿಹತಃ ಸುಬಾಹುಃ ।
ದೈತ್ಯಃ ಪರೋಽಸ್ಯಹೃತ ಪರ್ಣಮಿವಾರ್ಣವಾಂತಃ
ಶ್ರೀರಾಮಚಂದ್ರ ರಘುನಂದನ ಸುಪ್ರಭಾತಮ್ ॥ ೫

ಗತ್ವಾ ವಿದೇಹನಗರೀ ಮಮುರ್ಧೈ ರನಮ್ಯಂ
ರೌದ್ರಂ ಧನುರ್ದಲಯತಾ ಜಯತಾಯತಾಕ್ಷೀಂ ।
ಕಾಕುತ್ಸ್ಥ ಕೀರ್ತಿವನಿತಾಪ್ಯಮಲಾ ತ್ವಯಾಪ್ತಾ
ಸೀತಾಪತೇ ರಘುಪತೇ ನೃಪತೇ ಪ್ರಭಾತಮ್ ॥ ೬

ಘೋರಂ ಪ್ರಗೃಹ್ಯ ಪರಶುಂ ಪರುಷಂ ಬ್ರುವಾಣೋ
ಧೀರ ತ್ವಯಾ ಧೃತಶರೇಣ ಸ ರೈಣಿಕೇಯಃ।
ನೀತಸ್ತ್ವಮಂ ವಿಪಿನವಹ್ನಿರಿವಾಂಬುದೇನ
ಶ್ರೀರಾಮಚಂದ್ರ ಜಯ ಸಂಪ್ರತಿ ಸುಪ್ರಭಾತಮ್ ॥ ೭

ಸೌವರ್ಣವರ್ಣವಪುಷಾ ತವ ಕರ್ತುಮಿಚ್ಛನ್
ಮಾಯಾವಿನಿರ್ಮಿತ ಜಗತ್ತ್ರಿತಯಸ್ಯ ಮೋಹಮ್ ।
ಮೂಢೋ ಸುರಃ ಶಕಲಿತಃ ಶಿತಸಾಯಕೇನ
ಶ್ರೀರಾಮಚಂದ್ರ ಜಯ ರಾಘವ ಸುಪ್ರಭಾತಮ್ ॥ ೮

ಉಗ್ರೋರಗಾವಿವ ನಿಕೃತ್ಯ ಕರಾಲಬಾಹೂ
ಪ್ರಕ್ಷಿಪ್ಯ ಭೀಷ್ಮವಪುಷಂ ಸುಷಿರೇ ಕಬಂಧಂ ।
ಸೌಮಿತ್ರಿಣಾ ಸಹ ಮದೀಶ ಯಯಾಥ ಪಂಪಾಂ
ಶ್ರೀರಾಮಚಂದ್ರ ರಘುವೀರ ಜಯ ಪ್ರಭಾತಮ್ ॥ ೯

ಸುಗ್ರೀವ ಸಖ್ಯ ಬಹುಲೀಕೃತ ಕಾರ್ಯಶೀಘ್ರಂ
ಸೂನುಂ ನಿಷೂದ್ಯ ಭವತಾ ಬಲಿನಂ ಬಲಾರೇಃ ।
ಧರ್ಮಸ್ಯ ಸೂಕ್ಷ್ಮತಮತಾ ವಿವೃತಾವತಾನಃ
ಶ್ರೀರಾಮಚಂದ್ರ ಮನುಜೇಂದ್ರ ಜಯ ಪ್ರಭಾತಮ್ ॥ ೧೦

**ವಿದ್ವಾನ್ ಎನ್. ರಂಗನಾಥಶರ್ಮಾ**

**ಮಾಲಿನೀ**

ಅಥ ವಿರಹಸಮುತ್ಥಂ ಶೋಕವಹ್ನಿಂ ಪ್ರಿಯಾಯಾಃ
ರಘುವರ ಶಮಯಿಷ್ಯನ್ ಸ್ತಂಭಯನ್ನಂಬುರಾಶಿಮ್ ।
ತ್ರಿಭುವನ ಜಯಕೇತುಂ ಸೇತು ಮಾಬಧ್ಯ ಪಾರಂ
ಪ್ಲವಗಬಲಮನೈಷೀಃ ರಾಮ ತೇ ಸುಪ್ರಭಾತಮ್ ॥ ೧೧
ಪವನತನಯ ಮೇರೋಃ ಶೃಂಗ ಮಾರುಹ್ಯ ತುಂಗಂ
ರವಿರಿವ ಕಿರಣೌಘೈಃ ಕೀರ್ಣಮಂಧಂ ತಮಿಸ್ರಮ್ ।
ಸಪದಿ ದನುಜವೃಂದಂ ಘೋರ ಮಸ್ತ್ರೈರ್ನಿರಸ್ಯನ್
ಜಯಸಿ ಮಹಿತತೇಜಾ ದೇವ ತೇ ಸುಪ್ರಭಾತಮ್ ॥ ೧೨
ಗಿರಿಮಿವ ಗುರುಕಾಯಂ ಭೀಷಣಂ ಕುಂಭಕರ್ಣಂ
ಕವಲಮಿವ ಕಪೀನಾಂ ಯೂಥ ಮಾಚಾಮಯಂತಮ್ ।
ಮದಗಜಮಿವ ಸಿಂಹಃ ಸಂಹರನ್ ಜಿಹ್ಮಗೈ ಸ್ತ್ವಂ
ಜಯತಿ ವಿಬುಧಸಂಘೈಃ ಸ್ತೂಯಮಾನಃ ಪ್ರಭಾತಮ್ ॥ ೧೩



**ಶಿಖರಿಣೀ**

ಯದರ್ಥಂ ಜನ್ಮಾಭೂತ್ ಪ್ರಭವ ಜಗತಾಂ ತೇ ರಘುಕುಲೇ
ಯದರ್ಥೋವಾಸ ಸ್ತೇ ನಿಖಿಲ ಜಗದಾವಾಸವಿಪಿನೇ ।
ಸ ಧರ್ಮಃ ಸಂಸಿದ್ಧೋ ದಶವದನ ಸಂಹಾರವಿಧಿನಾ
ಪ್ರಭಾತಂ ಸಂಜಾತಂ ಕಥಯತಿ ಖಗಾನಾಂ ಕಲರುತಮ್ ॥ ೧೪

**ಮಂದಾಕ್ರಾಂತಾ**

ಲಂಕಾಯಾಂ ತ್ವಂ ನಿಶಿಚರಪತಿಂ ಸಾಂಪರಾಯೇ ಮಥಿತ್ವಾ
ಭಕ್ತಂ ಸಾಧುಂ ತದನುಜಮಥ ಸ್ಥಾಪಯಿತ್ವಾ ಸ್ವರಾಜ್ಯೇ ।
ದೇವ್ಯಾ ಯುಕ್ತಃ ಕನಕನಿಭಯಾ ವಿದ್ಯುತೇವಾಂಬುವಾಹಃ
ಪ್ರಾಪ್ಯಾಯೋಧ್ಯಾಂ ಭರತವರದೋ ರಾಮ ತೇ ಸುಪ್ರಭಾತಮ್ ॥

**ಶಾರ್ದೂಲವಿಕ್ರೀಡಿತಮ್**

ಕೌಸಲ್ಯಾತನಯಾ ಪ್ರಫುಲ್ಲನಯನಂ ಕಾರುಣ್ಯನಿಃಷ್ಯಂದನಂ
ಸೀತಾಮಾನಸರಾಜಹಂಸಮನಿಶಂ ಯೋಗೀಶ್ವರಾನ್ವೇಷಿತಮ್ ।
ಮಾಯಾಮಾನುಷವೇಷಧಾರಿಣ ಮಜಂ ಕೈವಲ್ಯನಾಥಂವಿಭುಂ
ವಂದೇ ದಾಶರಥಿಂ ಪ್ರಭಾತಸಮಯೇ ರಾಮಂ ಜಗನ್ಮಂಗಲಮ್ ॥



**ಪೃಥ್ವೀ**

ವಿದೇಹಕುಲನಂದಿನೀಹೃದಯಮಂದಿರೇ ಬಂಧುರೇ
ವಿರಾಜಿತಮಧೋಕ್ಷಜಂ ಜಲದಮೇಚಕಂ ರೋಚಕಂ ।
ಮನೋಗತಮಹಾರಿಪುಪ್ರಕರದಾರಕಂ ತಾರಕಂ
ಪ್ರಭಾತಸಮಯೇ ಭಜೇ ರಘುವರಂ ಪುಮಾಂಸಂ ಪರಮ್ ॥ ೧೭

**ಅನುಷ್ಟುಪ್**

ನಮೋ ಧರ್ಮಾಯ ಮಹತೇ ವಿಶ್ವಕಲ್ಯಾಣಧಾರಿಣೇ ।
ನಮಃ ಸತ್ಯಾಯ ಶಾಂತಾಯ ಶ್ರೀರಾಮಾಯ ನಮೋ ನಮಃ ॥ ೧೮



# ಲಕ್ಷ್ಮಣೋ ಲಕ್ಷ್ಮಿಸಂಪನ್ನಃ

ಶ್ರೀಮದ್ರಾಮಾಯಣದಲ್ಲಿ ರಾಮಲಕ್ಷ್ಮಣರ ಪಾತ್ರಗಳು ಒಂದೇ ಪಾತ್ರದ ಎರಡು ಮುಖಗಳು. ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ರಾಮಾವತಾರ ಕೃತ್ಯವನ್ನು ಪೂರ್ಣಗೊಳಿಸುವುದರಲ್ಲಿ ಇಬ್ಬರೂ ಪರಸ್ಪರ ಪೂರಕರು. ಅವುಗಳಲ್ಲಿ ಲಕ್ಷ್ಮಣನಿಗೆ ಪ್ರತ್ಯೇಕ ಅಸ್ತಿತ್ವವಿಲ್ಲ. ನಾಯಕನಾದ ರಾಮನ ದಿವ್ಯಗುಣಗಳನ್ನು ಪ್ರಕಟಿಸುವುದೂ, ಮಾನವಸಹಜವಾದ ಗ್ಲಾನಿಗಳುಂಟಾದಾಗ ಅವನಿಗೆ 'ಸ್ಮಾರಯೇ ತ್ವಾಂ ನ ಶಿಕ್ಷಯೇ' ಎಂಬ ನ್ಯಾಯದಲ್ಲಿ ಅವನ ಮಾಹಾತ್ಮ್ಯವನ್ನೂ ಜ್ಞಾಪಿಸುವುದೂ ಅವನ ಪಾತ್ರದ ಪ್ರಧಾನ ಕಾರ್ಯ. ವಾಲ್ಮೀಕಿ ಮಹರ್ಷಿಗಳು ಲಕ್ಷ್ಮಣನನ್ನು 'ಲಕ್ಷ್ಮಣೋ ಲಕ್ಷ್ಮಿಸಂಪನ್ನಃ ಬಹಿಃಪ್ರಾಣ ಇವಾಪರಃ' ಎಂದು ವರ್ಣಿಸಿದ್ದಾರೆ. ಅವನು ಕೈಂಕರ್ಯಲಕ್ಷ್ಮಿಯಿಂದ ಸಂಪನ್ನನಾದವನು ಎಂಬುದು ಇದರ ಅರ್ಥ. ಅದಕ್ಕನುಗುಣವಾಗಿಯೇ ಲಕ್ಷ್ಮಣನು ಅವನ ಜೀವನವನ್ನೆಲ್ಲ ರಾಮಸೇವೆಯಲ್ಲಿಯೇ ಕಳೆದಿದ್ದಾನೆ. ಹುಟ್ಟಿದಂದಿನಿಂದ ಅವನು ರಾಮನನ್ನು ಎಂದೂ ಅಗಲಲಿಲ್ಲ.

ಇಬ್ಬರೂ ದೇವನಿರ್ಮಿತವಾದ ಪಾಯಸದ ಫಲವಾಗಿ ದಶರಥನ ಇಬ್ಬರು ಹೆಂಡತಿಯರಲ್ಲಿ ವಿಷ್ಣುವಿನಂಶದಿಂದ ಜನಿಸಿದರು: ರಾಮನು ಪುನರ್ವಸು ನಕ್ಷತ್ರದಲ್ಲಿಯೂ ಲಕ್ಷ್ಮಣನು ಆಶ್ಲೇಷಾ ನಕ್ಷತ್ರದಲ್ಲಿಯೂ ಅವತರಿಸಿದವರು. ಜೊತೆಯಲ್ಲಿಯೇ ಬೆಳೆದರು. ಅವರ ಅನ್ಯೋನ್ಯತೆಯನ್ನು ವಾಲ್ಮೀಕಿಗಳು ಹೀಗೆ ವರ್ಣಿಸಿದ್ದಾರೆ.

'ಲಕ್ಷ್ಮೀವರ್ಧನನಾದ ಲಕ್ಷ್ಮಣನಾದರೋ ತನ್ನ ಅಣ್ಣನಾದ ಲೋಕಾಭಿರಾಮನಾದ ಶ್ರೀರಾಮನೊಡನೆ ಬಾಲ್ಯದಿಂದಲೂ ಅತ್ಯಂತ ಸ್ನೇಹದಿಂದಿದ್ದನು. ರಾಮನಿಗೂ ಲಕ್ಷ್ಮಣನನ್ನು ಕಂಡರೆ ತನ್ನ ಶರೀರಕ್ಕಿಂತ ಹೆಚ್ಚಿನ ಪ್ರೀತಿ. ಲಕ್ಷ್ಮಣನೆಂದರೆ ಹೊರಗಡೆ ಸಂಚರಿಸುವ ತನ್ನ ಪ್ರಾಣವೆಂದು ತಿಳಿದಿದ್ದನು. ಅವನು ಜೊತೆಯಲ್ಲಿ ಮಲಗದಿದ್ದರೆ ರಾಮನಿಗೆ ನಿದ್ದೆಯೇ ಬರದು. ಮೃಷ್ಟಾನ್ನವನ್ನು ತಂದುಕೊಟ್ಟರೂ ಲಕ್ಷ್ಮಣನನ್ನು ಬಿಟ್ಟು ತಿನ್ನುತ್ತಿರಲಿಲ್ಲ. ರಾಮನು ಕುದುರೆಯನ್ನೇರಿ ಬೇಟೆಗೆ ಹೊರಟರೆ ಕೂಡಲೇ ಲಕ್ಷ್ಮಣನು ಧನುಸ್ಸನ್ನು ಹಿಡಿದು ಮೈಗಾವಲಾಗಿ ಅವನ ಹಿಂದೆಯೇ ಹೊರಟುಬಿಡುತ್ತಿದ್ದನು.'

'ರೂಪ, ಸೌಂದರ್ಯ, ಶಕ್ತಿ, ಪರಾಕ್ರಮ' ಎಲ್ಲದರಲ್ಲಿಯೂ ಅವರು ಸಮಾನರು – ಯಾರು ನೋಡಿದರೂ ಅವರಲ್ಲಿ ಯಾವ ಭಿನ್ನತೆಯನ್ನೂ ಕಾಣುತ್ತಿರಲಿಲ್ಲ. ಜನಕರಾಜನು ರಾಮಲಕ್ಷ್ಮಣರನ್ನು ಕಂಡಾಗ ಈ ರೀತಿ ಪ್ರಶ್ನೆ ಮಾಡುವನು.

"ಈ ಕುಮಾರರು ಯಾರು ? ದೇವತೆಗಳಂತೆ ಕಾಣುತ್ತಾರಲ್ಲ. ಆನೆಯಂತೆ ಸಿಂಹದಂತೆ ಗಂಭೀರವಾದ ನಡಿಗೆ, ಶಾರ್ದೂಲದಂತೆ ವೃಷಭದಂತೆ ವೀರರೂ ಆಗಿದ್ದಾರೆ. ಕಣ್ಣುಗಳು ಪದ್ಮದಳದಂತೆ ವಿಶಾಲವಾಗಿವೆ. ಖಡ್ಗ, ಬತ್ತಳಿಕೆ, ಧನಸ್ಸುಗಳನ್ನು ಧರಿಸಿದ್ದಾರೆ. ರೂಪದಲ್ಲಿ ಅಶ್ವಿನೀ ದೇವತೆಗಳಂತಿದ್ದಾರೆ. ದೇವಲೋಕದಿಂದ ಸ್ವೇಚ್ಛೆಯಾಗಿ ಭೂಮಿಗೆ ಇಳಿದು ಬಂದ ದೇವತೆಗಳಿರಬಹುದೇ! ಇವರ ಕೈಯಲ್ಲಿ ಉತ್ತಮ ಆಯುಧಗಳಿವೆ. ಸೂರ್ಯಚಂದ್ರರು ಆಕಾಶವನ್ನು ಅಲಂಕರಿಸುವಂತೆ ಇವರು ಈ ದೇಶವನ್ನಲಂಕರಿಸಿದ್ದಾರೆ. ನಿಲವು ನಡೆನುಡಿಗಳಲ್ಲಿ ಒಬ್ಬರಂತೆ ಇನ್ನೊಬ್ಬರಿದ್ದಾರೆ. ಈ ವೀರರು ಇನ್ನೂ ಮುಂಗುರುಳುಗಳನ್ನು ಧರಿಸಿದ ಚಿಕ್ಕ ಪ್ರಾಯದವರು. ಇವರು ಯಾರಿರಬಹುದೆಂದು ತಿಳಿಯಲು ಕುತೂಹಲವಾಗಿದೆ."

ಶೂರ್ಪಣಖಿಯು ರಾಮಲಕ್ಷ್ಮಣರ ವಿಷಯವನ್ನು ಈ ರೀತಿ ತಿಳಿಸುತ್ತಾಳೆ:– ತರುಣರೂ ರೂಪಸಂಪನ್ನರೂ ಆದ ಇಬ್ಬರು ದಂಡಕಾರಣ್ಯಕ್ಕೆ ಬಂದಿದ್ದಾರೆ. ಅವರು ಸುಕುಮಾರರು, ಮಹಾಶೂರರು, ಕಮಲದಳದಂತೆ ವಿಶಾಲವಾದ ಕಣ್ಣುಳ್ಳ ಸುಂದರಾಂಗರು, ನಾರುಬಟ್ಟೆಯನ್ನುಟ್ಟು ಕೃಷ್ಣಾಜಿನವನ್ನು ಧರಿಸಿದ್ದಾರೆ. ಫಲಮೂಲಗಳನ್ನು ತಿನ್ನುವ ಜಿತೇಂದ್ರಿಯರಾದ ತಪಸ್ವಿಗಳು, ಧರ್ಮನಿಷ್ಠರು. ಇಬ್ಬರೂ ದಶರಥನ ಮಕ್ಕಳಂತೆ. ರಾಮಲಕ್ಷ್ಮಣರೆಂಬ ಹೆಸರಿನವರಂತೆ, ಇಬ್ಬರೂ ಗಂಧರ್ವರಾಜನಂತೆ ಚೆಲುವರು. ಅವರಲ್ಲಿ ಕ್ಷತ್ರಿಯ ಲಕ್ಷಣಗಳಿವೆ. ಇವರು ದೇವತೆಗಳೊ ಮನುಷ್ಯರೋ ಊಹಿಸಲಾಗುವುದಿಲ್ಲ'.

ಹನುಮಂತನು ರಾಮಲಕ್ಷ್ಮಣರನ್ನು ಪ್ರಶ್ನೆ ಮಾಡಿದ ರೀತಿಯಿದು :– 'ಎಲೈ ಮಹಾತ್ಮರೇ! ರಾಜರ್ಷಿಗಳಂತೆಯೂ ದೇವಕುಮಾರರಂತೆಯೂ ಕಾಣುವ ನೀವು ಕಠಿಣ ವ್ರತವನ್ನು ಕೈಗೊಂಡು ತಾಪಸವೇಷವನ್ನು ಧರಿಸಿದ್ದೀರಿ. ನೀವು ಇಲ್ಲಿಗೆ ಯಾವ ನಿಮಿತ್ತದಿಂದ ಬಂದಿರಬಹುದು. ಧೀರರಾದ ನೀವು ಸುವರ್ಣದಂತೆ ಥಳಥಳಿಸುವ ನಿಮ್ಮ ದೇಹದ ಮೇಲೆ ನಾರುಬಟ್ಟೆಗಳನ್ನು ಸುತ್ತಿಕೊಂಡಿದ್ದೀರಿ. ಆಜಾನುಬಾಹುಗಳಾದ ನಿಮ್ಮನ್ನು ನೋಡಿ ಇಲ್ಲಿರುವ ಮೃಗಗಳು ಹೆದರುತ್ತಿವೆ. ನಿಮ್ಮನೋಟಗಳು ಸಿಂಹದನೋಟದಂತೆ ಗಂಭೀರವಾಗಿವೆ. ಪರಾಕ್ರಮದಲ್ಲಿ ಸಿಂಹಗಳನ್ನು ಮೀರಿಸುವ ವೀರಾಗ್ರಣಿಗಳು ನೀವು. ಇಂದ್ರಚಾಪಗಳಂತಿರುವ ದಿವ್ಯಚಾಪವನ್ನು ಹಿಡಿದಿರುವ ಶತ್ರುಸೂದನರು. ಕಾಂತಿಶಾಲಿಗಳೂ ರೂಪಸಂಪನ್ನರೂ ಆಗಿದ್ದೀರಿ. ಮಹಾವೃಷಭದಂತೆ ಹೆಜ್ಜೆಯಿಡುತ್ತಿದ್ದೀರಿ. ನಿಮ್ಮ ದೀರ್ಘವಾದ ಬಾಹುಗಳು ಆನೆಯ ಸೊಂಡಿಲಿನಂತೆ ಮನೋಹರವಾಗಿವೆ. ದೇವತಾಸದೃಶರಾದ ನೀವು ರಾಜ್ಯವನ್ನಾಳಲು ಅರ್ಹರಾಗಿದ್ದೀರಿ. ರೂಪಲಾವಣ್ಯಗಳಲ್ಲಿ ಒಬ್ಬರನ್ನೊಬ್ಬರು ಹೋಲುತ್ತಿದ್ದೀರಿ. ಶೂರರಾದ ನೀವು ದೇವಲೋಕದಿಂದ ಇಳಿದು ಬಂದಂತೆ ಕಾಣುತ್ತದೆ. ನಿಮ್ಮನ್ನು ನೋಡಿದರೆ ಚಂದ್ರ ಸೂರ್ಯರೇ ಭೂಮಿಗಿಳಿದು ಬಂದಂತಿದೆ. ನೀವು ದೇವರೂಪಿಗಳಾದ ಮನುಷ್ಯರಿರಬಹುದೇ ? ನೀವಿಬ್ಬರೂ ಜಗತ್ತನ್ನೆ ರಕ್ಷಿಸಬಲ್ಲಿರಿ.'

ಶೂರ್ಪಣಖಿಯು ರಾವಣನಿಗೆ ಲಕ್ಷ್ಮಣನನ್ನು ಕುರಿತು ಈ ರೀತಿ ತಿಳಿಸಿದಳು–

'ಭ್ರಾತಾ ತಸ್ಯ ಮಹಾ ತೇಜಾ
ಗುಣತಸ್ತುಲ್ಯವಿಕ್ರಮಃ
ಅಮರ್ಷೀ ದುರ್ಜಯೋ ಜೇತಾ
ವಿಕ್ರಾಂತೋಬುದ್ಧಿಮಾನ್ ಬಲೀ
ರಾಮಸ್ಯ ದಕ್ಷಿಣಂ ಬಾಹುಃ
ನಿತ್ಯಂ ಪ್ರಾಣೋ ಬಹಿಶ್ಚರಃ

ಹೀಗೆ ಸರ್ವವಿಧದಲ್ಲಿಯೂ ರಾಮನಿಗೆ ಸಮಾನಲಕ್ಷಣಗಳನ್ನುಳ್ಳವನಾದರೂ ಲಕ್ಷ್ಮಣನು ರಾಮನ ಗುಣಗಳಿಂದ ಆಕರ್ಷಿತನಾಗಿ ಅವನ ದಾಸನಾಗಿದ್ದನು – ಗುಣೈರ್ದಾಸ್ಯಮುಪಾಗತಃ. ಆದುದರಿಂದ ರಾಮನಿಗೆ ಯಾವ ಕೆಡುಕುಂಟಾದರೂ ಲಕ್ಷ್ಮಣನು ಸಹಿಸತಕ್ಕವನಲ್ಲ. ಅವನಿಗೆ ಲೋಕಧರ್ಮವು ಚೆನ್ನಾಗಿ ಗೊತ್ತು. ಅದಕ್ಕೆ ವಿರೋಧವಾಗಿ ನಡೆದರೆ ಸಹಜವಾಗಿಯೇ ಸತ್ಯಾಗ್ರಹ ವುಂಟಾಗುತ್ತದೆ. ಅವನ ಕೋಪವು ನೆತ್ತಿಗೇರುತ್ತದೆ. ಆಗ ಅತನಿಗೆ ಏನು ಹೇಳಬೇಕು ಏನು ಹೇಳಬಾರದು ಎಂಬ ವಿವೇಚನೆಯಿರುವುದಿಲ್ಲ.

ಅವರ ತಂದೆಯಾದ ದಶರಥನು ರಾಮನಿಗೆ ಯುವರಾಜ ಪಟ್ಟಾಭಿಷೇಕ ಮಾಡುವುದಾಗಿ ನಿಶ್ಚಯಿಸಿದ್ದನು. ಅದು ಎಲ್ಲ ದೃಷ್ಟಿಯಿಂದಲೂ ಸಮಂಜಸವಾಗಿತ್ತು. ಆದರೆ ಕಿರಿಯ ಹೆಂಡತಿಯಾದ ಕೈಕೇಯಿಗೆ ವರದಾನಮಾಡುವ ನೆಪದಲ್ಲಿ

ಡಾ॥ ಎನ್. ಅನಂತರಂಗಾಚಾರ್

ರಾಮನಿಗೆ ನಡೆಯಬೇಕಾದ ಪಟ್ಟಾಭಿಷೇಕವನ್ನು ತಪ್ಪಿಸಿ ಅವನು ೧೪ ವರ್ಷ ಕಾಡಿಗೆ ಹೋಗಬೇಕೆಂದು ವಿಧಿಸಿದನು. ಈ ವಿಷಯವಾಗಿ ರಾಮ ಕೌಸಲ್ಯೆಯರು ಮಾತನಾಡುತ್ತಿದ್ದಾಗ ಲಕ್ಷ್ಮಣನು ಅಲ್ಲಿಯೇ ಇದ್ದನು. ಲೋಕನೀತಿಗೆ ವಿರೋಧವಾದ ಇದನ್ನು ಕೇಳಿ ಅವನು ರೋಷಭೀಷಣನಾದನು. ತನ್ನ ಅಭಿಪ್ರಾಯವನ್ನು ಬಹುಸ್ಪಷ್ಟವಾಗಿ ಹೀಗೆ ತಿಳಿಸಿದನು, 'ಅಮ್ಮಾ, ಬಹು ಕಾಮಿಯೂ ಸ್ತ್ರೀವಶ್ಯನೂ ಆದ ಆ ಮುದುಕನ ತೀರ್ಮಾನವು ನನಗೆ ಸ್ವಲ್ಪವೂ ಹಿಡಿಸುವುದಿಲ್ಲ. ರಾಮನು ಕಾಡಿಗೆ ಹೋಗಬೇಕಾದಂಥ ಅಪರಾಧವನ್ನೇನು ಮಾಡಿದ್ದಾನೆ. ರಾಮನಲ್ಲಿ ತಪ್ಪನ್ನು ಕಂಡುಹಿಡಿಯುವ ಮನುಷ್ಯನು ಈ ಲೋಕದಲ್ಲಿ ಯಾವನು ಇದ್ದಾನೆ. ಋಜುಸ್ವಭಾವದವನೂ ಕಪಟವನ್ನರಿಯದವನೂ ಶತ್ರುಗಳಲ್ಲಿಯೂ ಕರುಣವನ್ನು ತೋರಿಸುವವನೂ ಆದ ರಾಮನನ್ನು ಯಾರು ತ್ಯಜಿಸುತ್ತಾರೆ. ಇಷ್ಟು ವಯಸ್ಸಾದ ಈ ಮುದುಕನಿಗೆ ಏನು ದುರ್ಬುದ್ಧಿ. ಅಣ್ಣಾ! ಜನರೆಲ್ಲ ಈ ವಿಷಯವನ್ನು ತಿಳಿಯುವುದಕ್ಕೆ ಮುಂಚೆಯೇ ನೀನು ರಾಜ್ಯಾಧಿಕಾರವನ್ನು ವಹಿಸಿಕೊಂಡು ಬಿಡು. ನನ್ನ ಸಹಾಯವಿರುವಾಗ ನೀನು ಯಾರಿಗೂ ಹೆದರಬೇಕಾಗಿಲ್ಲ. ನಮಗೆ ವಿರೋಧವಾಗಿ ಬರಬಹುದಾದ ನಮ್ಮ ತಂದೆ, ಭರತ, ಅವನ ಪಕ್ಷದವರು—ಯಾರಾದರೂ ಸರಿಯೆ ಅವರನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಸಂಹಾರಮಾಡುತ್ತೇನೆ. ರಾಮ, ನಿನಗೆ ಸೇರಬೇಕಾದ ರಾಜ್ಯವು ಮತ್ತಾರಿಗೇ ಹೋಗಲು ನಾನು ಅವಕಾಶಕೊಡುವುದಿಲ್ಲ—ಅಮ್ಮಾ ಕೌಸಲ್ಯೆ, ನಾನು ಮನಃಪೂರ್ವಕವಾಗಿ ಅಣ್ಣನಲ್ಲಿ ಅನುರಕ್ತನಾಗಿದ್ದೇನೆ. ಈ ವಿಷಯದಲ್ಲಿ ಸತ್ಯದ ಮೇಲೆಯೂ ನನ್ನ ಧನುಸ್ಸಿನ ಮೇಲೆಯೂ ಆಣೆಯಿಟ್ಟು ಹೇಳುತ್ತೇನೆ. ರಾಮನು ಉರಿಯುವ ಬೆಂಕಿಯನ್ನಾಗಲಿ ಅರಣ್ಯವನ್ನಾಗಲಿ ಪ್ರವೇಶಿಸಬೇಕಾದರೆ ಅವನಿಗಿಂತಲೂ ನಾನು ಮೊದಲು ಪ್ರವೇಶಿಸುತ್ತೇನೆಂದು ತಿಳಿ, ಚಪಲಚಿತ್ತನೂ ಮಹಾಕಾಮಿಯೂ ಆದ ತಂದೆಯನ್ನೂ ಈಗಲೇ ಕೊಂದು ಹಾಕುವೆನು' ಎಂದನು.

ಲಕ್ಷ್ಮಣನನ್ನು ಕುರಿತು ರಾಮನು 'ತಮ್ಮ, ನನಗೆ ನಿನ್ನಲ್ಲಿರುವ ಸ್ನೇಹಾತಿಶಯವನ್ನು ನಾನು ಬಲ್ಲೆ. ನಿನ್ನ ಪರಾಕ್ರಮ, ತೇಜಸ್ಸು, ಸಾಮರ್ಥ್ಯ, ಗಳನ್ನೆಲ್ಲ ತಿಳಿದಿದ್ದೇನೆ. ಆದರೂ ತಂದೆಯ ಆಜ್ಞೆಯನ್ನು ಮೀರಬಾರದು. ಆದರಂತೆ ನಡೆ' ಎಂದು ಸಮಾಧಾನಮಾಡಿದನು.

ಲಕ್ಷ್ಮಣನ ಕೋಪವು ಇಮ್ಮಡಿಯಾಯಿತು. ಬಿಲದಲ್ಲಿದ್ದ ಹಾವನ್ನು ಕೆಣಕಿದಂತೆ ಅವನು ರೋಷ ವಿಸ್ಫಾರಿತೇಕ್ಷಣನಾಗಿ ಬುಸುಗುಟ್ಟಿದನು. ಮುಖವು ಕೆಂಪೇರಿತು. ತೋಳುಗಳನ್ನು ಬೀಸುತ್ತಾ ಓರೆಗಣ್ಣಿನಿಂದ ನೋಡುತ್ತ ಅಣ್ಣನನ್ನು ಕುರಿತು ಹೀಗೆಂದನು. 'ಅಣ್ಣಾ, ಧರ್ಮಕ್ಕೆ ಲೋಪ ಬರುವುದೆಂದೂ ಲೋಕಾಪವಾದ ಬರುವುದೆಂದೂ ನೀನು ಕಾಡಿಗೆ ಹೋಗುವ ಸಂಭ್ರಮ ಪಡುತ್ತೀಯೆ, ಇದು ಸರ್ವಥಾ ಅಯುಕ್ತ. ಭ್ರಾಂತಿಯಿಲ್ಲದ ನೀನು ಹೀಗೆ ಹೇಳಬಹುದೇ? ಮಹಾವೀರನೂ ಕ್ಷತ್ರಿಯೋತ್ತಮನೂ ಆದ ನೀನು ಹೇಡಿಯಂತೆ ದಿಕ್ಕಿಲ್ಲದ ಕೈಲಾಗದ ದೈವವನ್ನು ಯಾವ ದೊಡ್ಡ ವಿಷಯನೆಂದು ಹೊಗಳುತ್ತಿದ್ದೀಯೆ. ಅವರಿಬ್ಬರೂ ಅಧರ್ಮಿಗಳೆಂದು ನಿನಗೇಕೆ ಶಂಕೆ ಬರಲಿಲ್ಲ? ಈ ಧರ್ಮವೇ ಮಹಾಮೇಧಾವಿಯಾದ ನಿನ್ನ ಮನಸ್ಸಿಗೂ ಮಂಕು ಹಿಡಿಸಿದೆ. ಇದು ದೈವಿಕವೆಂದು ಭಾವಿಸಿರಬಹುದು. ನನಗೆ ದೈವವೆಂಬುದು ಹಿಡಿಸುವುದಿಲ್ಲ. ನನ್ನ ತೋಳುಗಳೂ ಆಯುಧಗಳೂ ಅಲಂಕಾರಕ್ಕಾಗಿ ಇರುವವಲ್ಲ. ಈ ದಿನ ನನ್ನ ಪರಾಕ್ರಮದಿಂದ ದೈವವನ್ನು ಮೆಟ್ಟಿ ಪುರುಷಕಾರದ ಶಕ್ತಿಯನ್ನು ಪ್ರದರ್ಶಿಸುತ್ತೇನೆ. ನಿನ್ನ ನಿರ್ಧಾರವನ್ನು ದಯವಿಟ್ಟು ಬಿಡು' ಎಂದು ಬಹುದೈನ್ಯದಿಂದ ಕೇಳಿಕೊಡನು. ರಾಮನು ತನ್ನ ಅಚಲವಾದ ನಿರ್ಧಾರದಿಂದ ಸ್ವಲ್ಪವೂ ಕದಲಲಿಲ್ಲ.

ರಾಮನು ಕೌಸಲ್ಯೆಗೂ ಸೀತೆಗೂ ಸಾಂತ್ವನವನ್ನು ಮಾಡಿ ಕಾಡಿಗೆ ಹೊರಡಲು ಸಿದ್ಧನಾದನು. ಆಗ ಲಕ್ಷ್ಮಣನು ಅಡ್ಡಲಾಗಿ ಬಂದು ರಾಮನನ್ನು ಕುರಿತು 'ಅಣ್ಣ ನಾನು ಧನುರ್ಧಾರಿಯಾಗಿ ಮುಂದೆ ಹೋಗುತ್ತ ನಿನ್ನೊಡನೆ ಅರಣ್ಯಕ್ಕೆ ಬರುತ್ತೇನೆ. ಮೃಗಪಕ್ಷಿಗಳು ಕೂಗುತ್ತ ವ್ಯಾಪಿಸಿಕೊಂಡಿರುವ ವಿವಿಧಾರಣ್ಯಗಳಲ್ಲಿ ನನ್ನೊಡನೆ ನೀನು ಸಂಚರಿಸಬಹುದು. ನಿನ್ನನ್ನು ಬಿಟ್ಟು ದೇವಲೋಕ ಲಭಿಸಿದರೂ ನನಗೆ ಬೇಡ ಅಮರನಾಗುವುದೂ ಬೇಡ' ಎಂದನು.

ಕೌಸಲ್ಯೆ, ಸುಮಿತ್ರೆ ಮತ್ತು ದಶರಥ ರಾಜನ ರಕ್ಷಣೆಗಾಗಿ ಲಕ್ಷ್ಮಣನು ಅಯೋಧ್ಯೆಯಲ್ಲಿರಬೇಕಾದುದು ಅವಶ್ಯಕವೆಂಬುದಾಗಿ ಹೇಳಿ ಅವನನ್ನು ಅಲ್ಲಿಯೇ ಇರಿಸಲು ಪ್ರಯತ್ನಪಟ್ಟ ರಾಮನನ್ನು ಲಕ್ಷ್ಮಣನು ಸಕಾರಣವಾಗಿ ನಿಷೇಧಿಸಿ ಹೀಗೆ ಪ್ರಾರ್ಥಿಸಿಕೊಂಡನು :—

'ನನ್ನನ್ನು ನಿನ್ನ ಪರಿಚಾರಕನನ್ನಾಗಿ ಮಾಡಿಕೊ. ಧರ್ಮಕ್ಕೆ ಯಾವಹಾನಿಯೂ ಬರುವುದಿಲ್ಲ. ನಾನು ಕೃತಾರ್ಥನಾಗುತ್ತೇನೆ. ನಿನಗೂ ಅನುಕೂಲವಾಗುತ್ತದೆ. ಧನುರ್ಬಾಣಗಳನ್ನು ಧರಿಸಿ ಹಾರೆ ಗುದ್ದಲಿಗಳನ್ನು ಹಿಡಿದು ನಿನ್ನ ಮುಂದೆ ದಾರಿಯನ್ನು ತೋರಿಸುತ್ತ ಹೋಗುತ್ತೇನೆ. ಪ್ರತಿದಿನವೂ ತಪಸ್ವಿಗಳಿಗೆ ಯೋಗ್ಯವಾದ ಫಲಮೂಲಗಳನ್ನೂ ಯೋಗ್ಯವಾದ ಇತರ ಪದಾರ್ಥಗಳನ್ನೂ ನಿನಗೆ ತಂದುಕೊಡುತ್ತೇನೆ. ನೀನು ಬೆಟ್ಟದ ತಪ್ಪಲು

(33 ನೇ ಪುಟ ನೋಡಿ)

# ಮಾಸ್ತಿಯವರ ಶ್ರೀರಾಮಪಟ್ಟಾಭಿಷೇಕ

"ಶ್ರೀನಿವಾಸ" ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಈ ಶತಮಾನದ ಕನ್ನಡದ ಶ್ರೇಷ್ಠ ಲೇಖಕರಲ್ಲೊಬ್ಬರಾದ ಮಾಸ್ತಿ ವೆಂಕಟೇಶಯ್ಯಂಗಾರರು ಕನ್ನಡ ಸಾಹಿತ್ಯ ಸರಸ್ವತಿಯ ಕೊರಳಿಗೆ ಕತೆ, ಕವನ, ನಾಟಕ, ಕಾದಂಬರಿ, ವಿಮರ್ಶೆಗಳೆಂಬ ನಾನಾ ತರಹದ ಅಮೂಲ್ಯ ಮುತ್ತುಗಳನ್ನು ಕೋದು ಮಾಲೆಯನ್ನಾಗಿ ಮಾಡಿ ಕೊಡಿಸಿ ಕನ್ನಡ ಮಾತೆಗೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಇತ್ತೀಚೆಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದು ಕನ್ನಡದ ಗೌರವೋನ್ನತಿಗೆ ಕಾರಣರಾಗಿದ್ದಾರೆ.

ಮಾಸ್ತಿ ಅವರ ಕೃತಿಗಳ ವೈಶಿಷ್ಟ್ಯವೆಂದರೆ ಮುಖ್ಯವಾಗಿ ಭಾರತೀಯ ಪರಂಪರಾಗತ ಜೀವನ ದರ್ಶನವನ್ನು ಸಾಂಸ್ಕೃತಿಕ ಹಿನ್ನೆಲೆಯನ್ನು ತಮ್ಮ ಕೃತಿಗಳಲ್ಲಿ ಒಡಮೂಡಿಸುವುದೇ ಆಗಿದೆ. ಎಲ್ಲ ಕಲೆಗಳಲ್ಲಿ ಶ್ರೇಷ್ಠವಾದ ಬದುಕಿನ ಕಲೆಯನ್ನು, ಅದು ಒಳಗೊಂಡಿರುವ ಪ್ರೀತಿ, ಸ್ನೇಹ, ವಿಶ್ವಾಸ ಅಂತಃಕರಣವನ್ನು, ಎಳೆಎಳೆಯಾಗಿ ಕಾಣಿಸಿ ಆ ಮೂಲಕ ಜೀವನದ ಒಳನೋಟವನ್ನು ಒದಗಿಸುವುದೇ ಶ್ರೀನಿವಾಸರ ಸಾಹಿತ್ಯದ ಮೂಲೋದ್ದೇಶವಾಗಿದೆ. ಈ ಕಾರಣದಿಂದಲೇ ಅವು ಓದುಗರ ಹೃದಯವನ್ನು ಒಮ್ಮೆಲೆ ಸ್ಪರ್ಶಿಸಿ ಪರಿಣಾಮವನ್ನುಂಟು ಮಾಡುವ ಅದ್ಭುತ ಶಕ್ತಿ ಪಡೆದಿದೆ. ಅವರ ಸಾಹಿತ್ಯ ಪ್ರತಿಭೆಯಲ್ಲಿ ಕಲೆ, ಭಾಷೆ, ಶೈಲಿ ಎಲ್ಲವು ಅತಿ ಸಹಜವಾಗಿ ಸರಳವಾಗಿ ಮೈದೋರಿ ತಮ್ಮದೇ ಆದ ಒಂದು ವಿಶಿಷ್ಟ ಸೌಂದರ್ಯಲೋಕವನ್ನು ನಿರ್ಮಾಣ ಮಾಡುತ್ತವೆ. ಆ ಲೋಕವನ್ನು ಪ್ರವೇಶಿಸಿದವರಿಗೆ ದೊರೆಯುವ ಅನುಭವಗಳು ಅಪಾರವಾದರೂ ಮುಖ್ಯವಾಗಿ ಒಂದು ಜನಾಂಗದ ಜೀವನಾಡಿಯ ಮಿಡಿತ, ತುಡಿತ ನೊರೆತ ಕೇಳಿಬರುತ್ತವೆ. ಜೊತೆಗೆ ಮಾಸ್ತಿಯವರ ವ್ಯಕ್ತಿತ್ವದ ಸಾಕ್ಷಾತ್ಕಾರವಾಗುತ್ತದೆ.

ಮಾಸ್ತಿಯವರು ಬರೆದಿರುವ ಆದಿಕವಿ ವಾಲ್ಮೀಕಿ ಮತ್ತು ಭಾರತತೀರ್ಥ ಎರಡೂ ನಾಡಿನ ಮಹಾಕಾವ್ಯಗಳನ್ನು ಕುರಿತಾದ ಶ್ರೇಷ್ಠ ವಿಮರ್ಶಾಕೃತಿಗಳು. ಈ ಎರಡೂ ಕೃತಿಗಳಲ್ಲಿ ಲೇಖಕರ ಆಳವಾದ ಅಧ್ಯಯನ, ಪರಿಶೀಲನೆ, ಚಿಂತನ ಧ್ಯಾನಗಳು ಅಡಕವಾಗಿದ್ದು ಅವರ ಕಾವ್ಯಚಿಂತನದ ಫಲಗಳಾಗಿವೆ. ಶ್ರೀರಾಮಪಟ್ಟಾಭಿಷೇಕ ಎಂಬುದು ಶ್ರೀನಿವಾಸರು ರಚಿಸಿದ ಒಂದು ದೀರ್ಘಕಾವ್ಯ. ಮೂಲ ವಾಲ್ಮೀಕಿ ರಾಮಾಯಣ ಒಂದು ಅಕ್ಷಯ ನಿಧಿ ಇದ್ದಂತೆ; ಮುತ್ತು ರತ್ನಗಳನ್ನು ಆರಿಸುವುದರ ಜೊತೆಗೆ ಪ್ರತಿಭಾಸಾಮರ್ಥ್ಯವಿದ್ದವರು ತಮ್ಮ ಹೊಸ ದೃಷ್ಟಿದರ್ಶನಗಳಿಂದ ನವೀನ ಸುಂದರ ಶಿಲ್ಪಗಳನ್ನು ರಚಿಸಬಹುದು. ಮಾಸ್ತಿಯವರು ಸಹ ರಾಮಾಯಣದ ಕಥೆಯನ್ನೇ ಹೇಳಿದ್ದರೂ ಕಥಾ ನಿರೂಪಣೆ ಪಾತ್ರ ಸೃಷ್ಟಿ, ಜೀವನದೃಷ್ಟಿ, ಮಾನವಸಂಬಂಧ ಎಲ್ಲದರಲ್ಲಿಯೂ ಒಂದು ಹೊಸತನವನ್ನು ತಂದಿರುವುದು ಈ ಕೃತಿಯ ಮೇಲ್ಮೆಯಾಗಿದೆ.

ರಾಮಾಯಣದ ಶ್ರೀರಾಮಚಂದ್ರ ಅವತಾರ ಪುರುಷನಾಗಿ ದೈವ ಸ್ವರೂಪನಾಗಿ ಜನಮನದಲ್ಲಿ ಶಾಶ್ವತವಾಗಿ ನೆಲೆಸಿರುವುದು ದಿಟವಾದರೂ ಮಾಸ್ತಿಯವರು, ಒಬ್ಬ ವ್ಯಕ್ತಿ ತನ್ನ ಉದಾತ್ತ ಗುಣಗಳಿಂದ ಹೇಗೆ ಬಾನೆತ್ತರಕ್ಕೆ ಬೆಳೆದು ಪುರುಷಶ್ರೇಷ್ಠನಾದ, ಲೋಕೋತ್ತರ ಚೇತನವಾದ ಎಂಬುದನ್ನು ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ. 'ರಾಮಚಂದ್ರನ ಸತ್ಯ, ದೇವಿ ಸೀತೆಯ ಶೀಲ ಜನಮನದಲ್ಲಿ ಬೇರೂರಿ' ನಿಲ್ಲ ಬೇಕೆಂಬುದೇ ಕವಿಯ ಮುಖ್ಯ ಆಶಯ. ತಮ್ಮ ಕಾವ್ಯದ ನಿರೂಪಣೆಯ ಬಗ್ಗೆ ಕವಿ ಹೇಳಿರುವ ಮಾತುಗಳಲ್ಲಿಯೆ ಈ ಕಾವ್ಯದ ವಿಶೇಷವನ್ನು ಗುರುತಿಸಬಹುದು. ವಾಲ್ಮೀಕಿ ರಚಿಸಿದ

ಕೃತಿಯ;

ತಿರುಳೆಂದು ನನಗೆ ತೋರಿದ ಮುಖ್ಯ ಕಥೆಯನು
ಕವಿ ಗುರುವ ಮನವೆಂದು ನನಗೆ ತೋರಿದ
ಮನದ
ಹರಿಪರಿಯನನುಸರಿಸಿ ನನ್ನೂಹೆ ನಿರ್ಮಿಸಿದ
ಹಲವು ಪೂರಕ ವಿವರದಿಂದ ಎಡೆಯನು ತುಂಬಿ
ಕನ್ನಡದ ಒಡ ಹುಟ್ಟಿಗೆಂದು ತಾಯ್ನುಡಿಯಲ್ಲಿ
ಇಲ್ಲಿ ಬರೆಯುತಲಿಹೆನು.

ಈ ಮಾತುಗಳಿಂದ ವ್ಯಕ್ತವಾಗುವ ಕವಿ ದೃಷ್ಟಿ ರಾಮ ತನ್ನ ಆದರ್ಶಗುಣಗಳಿಂದ ನಡತೆಯಿಂದ ದೈವತ್ತ್ವಕ್ಕೇರಿದನು ಎಂಬುವೇ ಆಗಿದೆ.

ಮಾಸ್ತಿಯವರ ಈ ಕಾವ್ಯದಲ್ಲಿ ರಾಮಪಟ್ಟಾಭಿಷೇಕದ ಕಥೆ ಇಡೀ ರಾಮಾಯಣದ ಕಥೆಯಾಗುತ್ತದೆ. ರಾಮಾಯಣದಲ್ಲಿ ಬರುವ ಪಾತ್ರಗಳ ಬಾಯಿಂದಲೇ ವರದಿ, ಸಂಭಾಷಣೆ ವರ್ಣನೆಗಳ ಮೂಲಕ ಕವಿ ಇಡೀ ರಾಮಾಯಣದ ಕಥೆಯನ್ನು ಸಂಗ್ರಹಿಸಿದ್ದಾರೆ. ಸನ್ನಿವೇಶಗಳು ಬೇರೆ ಬೇರೆಯಾಗಿದ್ದರೂ ಒಂದೊಂದೂ ಜೀವಂತವಾಗಿ ಕಲಾತ್ಮಕವಾಗಿ ಸಹಜ ಸುಂದರವಾಗಿ ಚಿತ್ರಿತವಾಗಿವೆ.

**ಶ್ರೀ ಚಿ. ನಂ. ಕೃಷ್ಣಮೂರ್ತಿ**

ಈ ಕಾವ್ಯದ ಸೊಗಸನ್ನು ಸಂಗ್ರಹವಾಗಿ ಪರಿಚಯಿಸುವ ಉದ್ದೇಶದಿಂದ ಕೆಲವು ಸನ್ನಿವೇಶಗಳನ್ನು, ಪಾತ್ರಗಳನ್ನು ವಿವೇಚಿಸಲಾಗಿದೆ.

ರಾಮ ತಂದೆಯ ಮಾತಿನಂತೆ ಕಾಡಿಗೆ ಹೋದ ಪ್ರಸಂಗವನ್ನು ಸುಮಂತ್ರ ಗುಹನಿಗೆ ವಿವರಿಸುತ್ತಾನೆ. ಅಯೋಧ್ಯಾ ನಗರದಲ್ಲಿ ಅಂದು ಆನಂದದ ದಿನ. ದಶರಥನ ಹಿರಿಯಮಗನಾದ ರಾಮಚಂದ್ರನಿಗೆ ಪಟ್ಟಾಭಿಷೇಕ ಮಹೋತ್ಸವ. ಇಡೀ ಅಯೋಧ್ಯಾನಗರ ಆ ದಿನ ಸಂತೋಷದ ಭರದಲ್ಲಿ ನಿದ್ರೆ ಮಾಡುವುದನ್ನೇ ಮರೆತಿದೆ. ಬೆಳಗಾದಂತೆ ಹೆಣ್ಣುಮಕ್ಕಳು ತಮ್ಮ ತಮ್ಮ ಮನೆಗಳ ಮುಂದೆ ಗುಡಿಸಿ ಸಾರಿಸಿ ರಂಗವಲ್ಲಿಯನಿಟ್ಟು ಬೆಳಗಿದರು. ಅರಮನೆಯಲ್ಲಿ ವಂದಿ ಮಾಗಧರು ಸುಪ್ರಭಾತವನ್ನು ಹಾಡಿದರು. ಆದರೆ ದೊರೆಗಳು ಏಳಲಿಲ್ಲ. ಎಲ್ಲರಿಗೂ ಆತಂಕವಾಯಿತು. ದೊರೆಗಳನ್ನು ಕಾಣಲೆಂದು ಸುಮಂತ್ರ ಒಳಕ್ಕೆ ಹೋಗುತ್ತಾನೆ. ಆಗ ಅವನು ಕಂಡ ದೃಶ್ಯವಿದು. ಏನೋ ವಾದವನ್ನು ಮುಗಿಸಿ ನಿರಾಶನಾಗಿ ದೊರೆ ಮಂಚದ ಮೇಲೆ ಮಲಗಿದ್ದಾನೆ. ಕೈಕೇಯಿ ಪಕ್ಕದಲ್ಲಿಯೇ ಕುಳಿತಿದ್ದಾಳೆ. ದೊರೆ ಕಣ್ಣು ತೆರೆದು ಸುಮಂತ್ರನತ್ತ ನೋಡಿದನು. ಆದರೆ ಆ ನೋಟದಲ್ಲಿ ದುಗುಡದ ಹೊಳೆ ಹರಿಯುತ್ತಿದೆ. ಕೈಕೇಯಿ ರಾಮನನ್ನು ಕರೆತರುವಂತೆ ಸುಮಂತ್ರನಿಗೆ ಸೂಚಿಸುತ್ತಾಳೆ. ಆಗ ಸುಮಂತ್ರ ರಾಮನ ಬಳಿಗೆ ಬರುವ ಸಂದರ್ಭದಲ್ಲಿ ಅವನು ನೀಡುವ ರಾಮನ ಚಿತ್ರವಿದ್ದು

ಚಕ್ರವರ್ತಿ ಕುಮಾರ ಹೆಮ್ಮೆಯೆಂಬುದೆ ಇಲ್ಲ
ಸರಳವೆಂದರೆ ಆನಿತು ಸರಳ ಆ ಚೇತನ

ಸುಮಂತ್ರನ ಮಾತನ್ನು ಕೇಳಿ ರಾಮ ತಂದೆಯನ್ನು ಕಾಣಲು ಸುಮಂತ್ರನನ್ನು ಒಡಗೂಡಿ ಬರುತ್ತಾನೆ. ಅಷ್ಟರಲ್ಲಿ ಲಕ್ಷ್ಮಣನೂ ಬರುತ್ತಾನೆ. ರಥದಲ್ಲಿ ಹೊರಟ ರಾಮನನ್ನು ಜನರು

ಸುಖಿಯಾಗು
ಲೋಕವತ್ಸಲರಾಮ, ನಿನ್ನಂಥಪುತ್ರನನು
ಹಡೆದ ಕೌಸಲ್ಯೆ ಧನ್ಯೆ ನಿನ್ನನು ಇನಿಯ
ಎಂದು ಕರೆಯುವ ಸೀತೆ ನಾರೀ ಸಮೂಹದಲಿ
ಎಲ್ಲರನು ಮೀರಿಸಿದ ಭಾಗ್ಯ ಶಾಲಿನಿಯೆ ಸತ್ಯ

—ಎಂದು ಹೇಳುತ್ತಾರೆ. ರಾಮನನ್ನು ಕಂಡಾಗ

ದಶರಥ ಮಾತನಾಡಲಿಲ್ಲ. ಮನಸ್ಸು ನೋವಿನಿಂದ ಬೇಯುತ್ತಿರುವಾಗ ಮಾತಾದರೂ ಹೇಗೆ ಹೊರ ಟೀತು.

ದೊರೆ ಇವರ

ನೋಡಿದರು ನೋಡಿ ನೋಟವ ನಿಲಿಸಲಾರದೆ
ರಾಮ ಎಂದುಸುರಿದರು ಬೇರೆ ನುಡಿ ಒಂದಿಲ್ಲ
ನೆಲದತ್ತ ತಿರಿಗಿದರು ನಿಟ್ಟುಸಿರ ಬಿಟ್ಟರು

ತಂದೆಯ ಸ್ಥಿತಿಯನ್ನು ಕಂಡು ರಾಮನ ಎದೆ ಬಿರಿಯಿತು. ತನ್ನಿಂದ ಏನಾದರೂ ಅಪರಾಧವಾಯಿತೋ? ಎಂದು ಮನಸ್ಸು ಶಂಕಿಸಿತು. ಚಿಕ್ಕಮ್ಮನನ್ನು ಕಾರಣ ಕೇಳಿದಾಗ "ತಂದೆ ಬಯಸುವುದನ್ನು ನೀನು ನಡೆಸುವೆ ಎಂದು ಆಶ್ವಾಸನೆ ಕೊಟ್ಟರೆ ತಿಳಿಸುವೆನು" ಎಂದಳು. ಆಗ ರಾಮ ನಾಡುವ ಮಾತೆಂದರೆ

ತಂದೆ ಬಯಸುವುದ

ನಾನು ನಡೆಸುವನೆಂದು ಆಶ್ವಾಸನವೆ? ಏಕೆ
ಬೇಕು ಆಶ್ವಾಸನ? ಅವರಾಜ್ಞೆಯನು ಮೀರಿ
ಈವರೆಗೆ ಎಂದಿರಲಿ ನಡೆದ ಮಗನಲ್ಲ ನಾ
ಇಂದು ಅದ ಮೀರಿ ನಡೆಯುವುದಿಲ್ಲ ಎಂಬುದನು
ತಂದೆ ಬಲ್ಲರು, ನೀವು ಬಲ್ಲಿರಿ ಎಲ್ಲರೂ
ಬಲ್ಲರಿದ ಆ ಇಚ್ಛೆ ಏನು ಅದ ತಿಳಿಸಿರಿ
ಅಗ್ನಿಯನು ಹೊಗು ಎನಲು ನಗುತ

ಹೊಗುವೆನು ವಿಷವ

ಉಣು ಎನಲು ಸಂತೋಷದಿಂದ ಉಣುವೆನು,

ಒಂದು

ಕ್ಷಣ ಯೋಚಿಸುವನಲ್ಲ ತಡಮಾಡುವವನಲ್ಲ
ಈ ನಾನು ಎಂದಿರಲಿ ಎರಡು ನುಡಿದವನಲ್ಲ

ಹಾಗಾದರೆ ದೊರೆಗಳ ಅಪೇಕ್ಷೆಯನ್ನು ತಿಳಿಸುವುದಾಗಿ ಹೇಳಿ 'ಯುವರಾಜ ಪಟ್ಟವನ್ನು ಭರತನಿಗೆ ಕೊಡಬೇಕು, ನೀನು ಹದಿನಾಲ್ಕು ವರುಷ ವನವಾಸಕ್ಕೆ ತೆರಳಬೇಕು' ಎಂದಳು. ತಮ್ಮನಿಗೆ ಪಟ್ಟವಾದರೆ ತನಗೆ ಪರಮ ಸಂತೋಷವೆಂದು ಕೂಡಲೆ ಭರತನನ್ನು ಕರೆಸಬೇಕೆಂದು ರಾಮ ತಿಳಿಸುತ್ತಾನೆ. ಆದರೆ ತಂದೆ ತನ್ನನ್ನು ಮಾತನಾಡಲಿಲ್ಲವೆಂದು ಮನಸ್ಸು ಕೊರೆಯುತ್ತಿದೆ. ಆಗ ಕೈಕೇಯಿ ನೀನು ತಂದೆಯ ಅಪ್ಪಣೆಗಾಗಿ ಕಾಯುವುದು ಬೇಡ ನೀನು ಹೊರಡುವವರೆಗೂ ದೊರೆ ಅನ್ನ ನೀರನ್ನು ಮುಟ್ಟುವುದಿಲ್ಲ ಎನ್ನುತ್ತಾಳೆ.

ಆಗ ಚಿಕ್ಕಮ್ಮನನ್ನು ಕುರಿತು ರಾಮ "ತಾಯಿ ನಾನು ಅರ್ಥಪರನಲ್ಲ ನನಗೆ ರಾಜ್ಯಾಧಿಕಾರ ಬೇಡ. ಕಾಡಿಗೆ ಹೋಗೆಂದಿರಿ ಹೋಗುತ್ತೇನೆ. ಆದರೆ ಹೋಗುವೆನೆಂಬ ವಿಚಾರವನ್ನು ತಾಯಿಗೆ ತಿಳಿಸಬೇಕು. ಹಾಗೆಯೆ ಈ ವಿಚಾರವನ್ನು ನಿಮ್ಮ ಸೊಸೆ ಸೀತೆಗೂ ತಿಳಿಸಬೇಕು. ಇದಕ್ಕೆ ಎಷ್ಟು ಕಾಲ ಬೇಕೋ ಅಷ್ಟು ಕಾಲ ಮಾತ್ರ ನಾನು ನಗರದಲ್ಲಿರುತ್ತೇನೆ" ಎಂದು ಹೇಳಿ ತಂದೆಯ ಪಾದಗಳನ್ನು ಕಣ್ಣಿಗೆ ಒತ್ತಿಕೊಂಡು ಕಿರಿಯ ತಾಯಿಗೆ ನಮಸ್ಕರಿಸಿ ಹೊರಡುತ್ತಾನೆ. ರಾಮಚಂದ್ರ ಕೌಸಲ್ಯಾದೇವಿಯನ್ನು ಕಾಣಲು ಬಂದ ಸಂದರ್ಭವನ್ನು ಕವಿ ಸೊಗಸಾಗಿ ಬಣ್ಣಿಸಿದ್ದಾರೆ. ರಾಮನಿಗೆ ತನಗೆ ಇಂತಹ ಸ್ಥಿತಿ ಒದಗಿತಲ್ಲ ಎಂಬ ದುಃಖ ಸ್ವಲ್ಪವೂ ಇಲ್ಲ, ಆದರೆ ತಾಯಿಗೆ ಈ ಸಂಗತಿಯನ್ನು ಹೇಗೆ ಹೇಳುವುದು ಎಂದು ಮನಸ್ಸು ಸ್ವಲ್ಪ ಅಳುಕುತ್ತಿದೆ. ತಾಯಿಯಾದರೂ ಮಗನನ್ನು ಅಕ್ಕರೆಯಿಂದ ಬರಮಾಡಿಕೊಂಡು.

ಧರ್ಮಶೀಲ ವೃದ್ಧ ರಾಜರ್ಷಿಗಳು ನಿನ್ನ
ಕುಲದ ಹಿರಿಯರು ಆ ಮಹಾತ್ಮರೆಂತಂತು ನೀ
ಕೀರ್ತಿಯನು ಧರ್ಮವನು ಸಾಧಿಸು

ತಂದೆಯನು

ಸತ್ಯ ಪ್ರತಿಜ್ಞ ನೆಂದನಿಸು, ಅವರಿಚ್ಛೆಯನು

ನಡೆಸು

ಎನ್ನುತ್ತಾಳೆ. ರಾಮನಾದರೂ ಅದೇ ಮಾತನ್ನು ನಡೆಸಿ ಕೊಡುವುದಕ್ಕೆ ಹೊರಟದ್ದೇನೆಂಬುದನ್ನು ತಿಳಿಸುವುದಕ್ಕಾಗಿ ಬಂದಿದ್ದಾನೆ. ರಾಮ ತಾನು ವನವಾಸ ಹೊರಡುತ್ತಿರುವ ಸುದ್ದಿಯನ್ನು ತಿಳಿಸಿದಾಗ ಕ್ಷಣದ ಹಿಂದೆ ಮಗನನ್ನು ಸತ್ಯವಂತನಾಗು ಎಂದ ತಾಯಿಯ ಹೃದಯ ಈಗ ವಾಸ್ತವವನ್ನು ಎದುರಿಸಲಾರದೆ ಕಂಗಾಲಾಗಿದೆ. ತಾಯಿ ಮತ್ತು ಹಿರಿಯ ರಾಣಿಯವರ ಸ್ಥಿತಿಯನ್ನು ಕವಿ ಹೀಗೆ ಬಣ್ಣಿಸಿದ್ದಾರೆ.

ಕಿವಿಗೆ ಬಿದ್ದುದೆ ತಾಯಿ ಹಿರಿಯರಾಣಿಯರು
ಬುಡಕಡಿದ ಸಾಲ ವೃಕ್ಷದ ರೀತಿ ಉರುಳಿದರು
ನೆಲಕೆ ಭೂಮಿಯ ಮೇಲೆ ಕೆಡೆದೊಂದು ಬಾಳೆ

ಮರ

ಎಂಬ ತೆರನಿದ್ದ ಗತಚೇತನದ ಆ ತಾಯ

ಆರುಗುವರ ಎತ್ತಿ ಕುಳ್ಳಿರಿಸಿದರು

ಎಚ್ಚರಗೊಂಡಾಗ ಆ ತಾಯಿ ಪರಿತಪಿಸುತ್ತಾಳೆ. ಬಂಜೆಯಾಗಿದ್ದವಳು ಹಾಗೆಯೆ ಇದ್ದಿದ್ದರೆ ಚೆನ್ನಿತ್ತು ಪಾಪಿಯಾದ ನಾನು ನಿನ್ನನ್ನು ಏಕೆ ಹೆತ್ತನೊ ಈ ದುಃಖದೆದುರು ಮಕ್ಕಳಿಲ್ಲ ಎನ್ನುವ ಸಂಕಟ ಲೆಕ್ಕಕ್ಕೆ ಬಾರದು ಎನ್ನುತ್ತಾಳೆ. ಲಕ್ಷ್ಮಣ ಶತ್ರುಘ್ನರು ತಂದೆಯ ಬಗ್ಗೆ ಕ್ರೋಧಗೊಂಡಿದ್ದಾರೆ. ರಾಮ ಅವರನ್ನು ಸಮಾಧಾನ ಗೊಳಿಸುತ್ತ.

ಕೊಪವೇತಕೆ ಅಪ್ಪ? ಪದವಿ ತಪ್ಪಿತು ಎಂದೆ?
ಪದವಿ ತಪ್ಪಿತು, ಪದವಿ ಮಾತ್ರ ತಪ್ಪಿತು ಧರ್ಮ
ತಪ್ಪಿತೆ, ಸದ್ಗತಿಯ ಕೈಯಿಂದ ಜಾರಿತು
ಧರ್ಮದಲಿ ನಡೆದ ಪದವಿಗೆ ಸಾಟಿಯಾದ ಪದ
ಬೇರೆ ಯಾವುದು ತಮ್ಮ ? ಅರ್ಥವೊ
ಕಾಮವೊ
ಧರ್ಮದೊಡನೈತಹವೆ, ಏತರಲಿ ಅದನುಳಿದು
ಏತಹರಿ ಅದನು ಅನುಭವಿಸುವುದು ಸಲ್ಲದು

ಅಣ್ಣನ ಮಾತಿಗೆ ಸಮಾಧಾನಗೊಂಡ ಲಕ್ಷ್ಮಣ ತಾನೂ ಅಣ್ಣನ ಜೊತೆಗೆ ಹೊರಡುವ ನಿರ್ಧಾರ ಮಾಡುತ್ತಾನೆ. ಕೊನೆಯಲ್ಲಿ ಕೌಸಲ್ಯಾದೇವಿ ಮಗನನ್ನು ಹರಸುತ್ತಾಳೆ.

ಇನ್ನು ಸೀತಾದೇವಿಯನ್ನು ಕಾಣಲು ಬರುತ್ತಾನೆ. ಸೀತೆಯ ಕುರಿತು ರಾಮ 'ತಂದೆ ನನಗೆ ವನವಾಸವನ್ನು ವಿಧಿಸಿದ್ದಾರೆ. ಅತ್ತೆ ಮಾವಂದಿರ ಸೇವೆ ಮಾಡುತ್ತ ಹದಿನಾಲ್ಕು ವರುಷ ಕಾಯುತ್ತಿರಬೇಕೆಂದು, ಹೇಳುತ್ತಾನೆ. ಆದರೆ ಸೀತೆ.

ಪತಿಕಾಡ
ಹೋಗುತ ಸತಿ ಊರಲಿಹ ಮಾತು ಇದು
ಏತರದು?
ಪತಿ ಇದನು ಇನಿತು ಲಘುವಾಗಿ
ನುಡಿಯುತಲಿಹ
ಈ ನಡತೆ ಏತರದು? ಪತಿಕಾಡ ಹೋಗಲೆಂದ
ಹಿರಿಯ ಜನ, ಸತಿ ಅವನ ಜೊತೆಯಲಿ ಸಾರಲಿ
ಎಂದು ಪ್ರತ್ಯೇಕ ಹೇಳಬೇಕೆ?

ಎನ್ನುತ್ತಾಳೆ. ಆದರೂ ರಾಮ ಬೇಡವೆಂದಾಗ ಸೀತೆ ನೀನು ಕರೆದೊಯ್ಯದಿದ್ದರೆ ನೀನತ್ತ ಹೋಗಲು ನಾನು ಯಾವುದೋ ರೀತಿಯಲ್ಲಿ ಜೀವವನ್ನು ತೊರೆಯುತ್ತೇನೆ ಎಂದು ಹೇಳಿ ಪತಿಯ ಎದೆಗೊರಗಿ ಕಣ್ಣೀರಿಡುತ್ತಾಳೆ. ರಾಮ ಮಣಿಯಲೇಬೇಕಾಗುತ್ತದೆ. ಕೊನೆಯಬಾರಿಗೆ ತಂದೆಗೆ ನಮಸ್ಕರಿಸಿ ಹೊರಡುವುದೆಂದು ತಿಳಿದು ತಂದೆಯನ್ನು ಕಾಣಲು ಬರುತ್ತಾನೆ. ದಶರಥನಾದರೋ ಮಗನನ್ನು ಬಿಟ್ಟಿರಲಾರದೆ ಒಂದು ದಿನ ತಡೆದು ಮಾರನೆಯದಿನ ಹೋಗಬಹುದೆಂದು ತಿಳಿಸುತ್ತಾನೆ. ಆದರೆ ರಾಮನಾದರೋ "ಇಂದಿನ ಮನಸ್ಸು ನಾಳೆಗೆ ಬದಲಾಗಬಹುದು. ಅಂತಹ ಅಪಾಯ ಎದುರಾಗುವುದು ಬೇಡ" ಎಂದು ಆ ಕ್ಷಣದಲ್ಲಿ ಹೊರಡುವುದಾಗಿ ತಿಳಿಸಿ ಹಿರಿಯರ ಕಾಲಿಗೆ ಎರಗಿ ರಥದಲಿ ಕುಳಿತು ಮೂವರೂ ಕಾಡಿನಭಿಮುಖವಾಗಿ ಹೊರಟು ಬಿಟ್ಟರು. ಅಲ್ಲಿಗೆ ಸುಮಂತ್ರ ಹೇಳಿದ ಕಥಾಭಾಗ ಮುಕ್ತಾಯವಾಗುತ್ತದೆ.

ಹೀಗೆ ಈ ಕೃತಿಯಲ್ಲಿ ಬರುವ ಎಲ್ಲ ಸನ್ನಿವೇಶಗಳೂ ಭಾವಪೂರ್ಣ ಚಿತ್ರಗಳ ಸರಮಾಲೆಯಾಗಿವೆ. ಸುಂದರ ಸನ್ನಿವೇಶ ನಿರ್ಮಾಣದಂತೆಯೆ ಪಾತ್ರ ಸೃಷ್ಟಿಯಲ್ಲಿಯೂ ಮಾಸ್ತಿ ಅವರ ಪರಿಣಿತ ಪ್ರಜ್ಞೆ, ಕಲಾವಂತಿಕೆ ಮಾನವೀಯತೆ ಸ್ಪಷ್ಟಗೊಂಡಿವೆ. ವಾಲ್ಮೀಕಿ ಸೃಷ್ಟಿಸಿದ ಪಾತ್ರಗಳೇ ಆಗಿದ್ದರೂ ಮಾಸ್ತಿ ಅವರ ಕೈಯಲ್ಲಿ ಅವು ಮರುಹುಟ್ಟು ಪಡೆದಿವೆ. ಪಾತ್ರಗಳ ಅಂತರಾಳವನ್ನು ಒಳಹೊಕ್ಕು ನೋಡಿ ಅವುಗಳ ಸ್ವಭಾವ ಸತ್ತ್ವಗಳನ್ನು ಕಾಣಿಸಿರುವ ರೀತಿ ಶ್ರೀನಿವಾಸರ ಸೂಕ್ಷ್ಮ ಸಂವೇದನೆಗೆ, ದರ್ಶನಶಕ್ತಿಗೆ ಸಾಕ್ಷಿಯಾಗಿವೆ.

ಶ್ರೀರಾಮಪಟ್ಟಾಭಿಷೇಕದಲ್ಲಿ ಬರುವ ಕೈಕೇಯಿ ಪಾತ್ರವನ್ನು ಗಮನಿಸಿದಾಗ ಆಕೆ ಹಟಮಾರಿ, ಅಸೂಯಾಪರಳು, ಸ್ವಾರ್ಥಿ ಎಂಬುದು ದಿಟವಾದರೂ ಕೈಕೇಯಿಯ ಅಂತರಾಳದಲ್ಲಿ ಪ್ರೀತಿವಾತ್ಸಲ್ಯಗಳು ಅಡಗಿದ್ದವು. ಆದ್ದರಿಂದಲೇ ಅವಳ ಸ್ವಭಾವದಲ್ಲಿ ಪರಿವರ್ತನೆ ಸಾಧ್ಯವಾಯಿತು. ಕೈಕೇಯಿ ರಾಮನನ್ನು ಹೆತ್ತ ಮಗನಿಗಿಂತಲೂ ಹೆಚ್ಚು ಪ್ರೀತಿಯಿಂದ ಕಾಣುತ್ತಿದ್ದಳು. ಆದ್ದರಿಂದಲೇ ಭರತ ಅಣ್ಣನನ್ನು ಕರೆತರಲು ಚಿತ್ರಕೂಟಕ್ಕೆ ಹೊರಟಾಗ ಅವರೊಡನೆ ತಾನೂ ಹೊರಟಳು. ರಾಮ ಕಾಡಿಗೆ ತೆರಳಿದಮೇಲೆ ಅಯೋಧ್ಯೆಗೆ ಬಂದ ಭರತನಿಗೆ ಸುದ್ದಿತಿಳಿದು ಈ ದುರ್ಘಟನೆಗೆ ತನ್ನ ತಾಯಿಯೆ ಕಾರಣಳೆಂದು ತಿಳಿದು ಆಕೆಯನ್ನು ನಿಂದಿಸಿ ತಾಯಿಯನ್ನು ನಿರಾಕರಿಸುತ್ತಾನೆ.



ಹೆತ್ತ ತಾಯಿಗೆ ಸಮನಾಗಿ ಕಾಣುತ್ತಿದ್ದ ರಾಮ ತನ್ನಿಂದ ದೂರವಾಗಿ ಹೋದ ತನ್ನ ಅಕಾರ್ಯಕ್ಕಾಗಿ ಆಕೆಯ ಹೃದಯ ಪರಿತಪಿಸುತ್ತಿದೆ. ಹೀಗೆ ಪಶ್ಚಾತ್ತಾಪದಿಂದ ನೋಯುತ್ತಿರುವ ಕೈಕೇಯಿಯ ಮನಸ್ಸಿನ ಪರಿವರ್ತನೆಯನ್ನು ಶ್ರೀನಿವಾಸರು ಹೃದಯಂಗಮವಾಗಿ ಚಿತ್ರಿಸಿದ್ದಾರೆ. 'ಏನೋ ಅಚಾತುರ್ಯದಿಂದ ಬಾಯ್ತಪ್ಪಿ ಕಾಡಿಗೆ ಹೋಗೆಂದರೆ ಅದನ್ನೇ ನೀನು ನಂಬುವುದೇ ಮಗನೇ?' ಎಂದು ದುಃಖಪಡುವ ಆಕೆಯನ್ನು ಕಂಡಾಗ ಕೈಕೇಯಿಯ ಪ್ರೀತಿ ತುಂಬಿದ ಹೃದಯ ಗೋಚರಿಸುತ್ತದೆ. ವನವಾಸವನ್ನು ಮುಗಿಸಿಕೊಂಡು ರಾಮಸೀತೆಯರು ಅಯೋಧ್ಯೆಗೆ ಹಿಂತಿರಿದಾಗ ಕೈಕೇಯಿ ಅವರನ್ನು ಎದುರುಗೊಳ್ಳಲು ಹಿಂಜರಿದಾಗ ಕೌಸಲ್ಯೆ;

ಮಗನಿಗೂ ಮಿಗಿಲು
ಎಂದು ನೀನೊಲಿದು ಸಾಕಿದ ನನ್ನ ಮಗ ನಿನ್ನ
ವ್ರತ ಹರಕೆ ಪುಣ್ಯಗಳ ಫಲವಾಗಿ ಸುಖವಾಗಿ
ಹಿಂದಿರುಗಿ ಬಂದಿಹನು ಇವನ ಕರೆದುಕೊ,
ತಾಯಿ
ಸಂಕೋಚ ಬೇಡ, ಬಾ ಹರಸಿ ಕರೆದುಕೊ

ಎಂದು ಪ್ರೀತಿಯಿಂದ ಕೈಹಿಡಿದು ಕರೆ ತರುತ್ತಾಳೆ. ಒಂದು ಕಾಲದಲ್ಲಿ ಕೌಸಲ್ಯೆಯ ಮನದಲ್ಲಿದ್ದ ಕೋಪ ದ್ವೇಷ ಭಾವನೆಗಳು ಕರಗಿ ಹೋಗಿ ಒಲವು ತುಂಬಿದೆ. ಹೀಗೆ ಮಾಸ್ತಿ ಅವರು ಕೈಕೇಯಿಯ ಪಾತ್ರವನ್ನು ಅತ್ಯಂತ ಸಹಾನುಭೂತಿಯಿಂದ ಕಂಡು ಚಿತ್ರಿಸಿರುವುದು ಮಾನವ ಸ್ವಭಾವದ ವಿಶ್ಲೇಷಣೆಗೆ ನಿದರ್ಶನವಾಗಿದೆ.

ಮಾಸ್ತಿಯವರ ಕಲಾ ಕುಂಚದಿಂದ ಹೊರ ಬಂದ ಮತ್ತೊಂದು ಪಾತ್ರ ಊರ್ಮಿಳೆ. ಆಕೆಯ ಅಂತರಂಗವನ್ನು ಕವಿಹೃದಯ ಗ್ರಹಿಸಿ ಹೃದ್ಯವಾಗಿ ನಿರೂಪಿಸಿದೆ. ಊರ್ಮಿಳೆಯ, ಔದಾರ್ಯ, ಸೀತೆಯನ್ನು ಕುರಿತ ಪ್ರೀತಿ, ಹಿರಿಯರಲ್ಲಿದ್ದ ಭಕ್ತಿ ಗೌರವಗಳು ಮೇಳೈಸಿದ ಊರ್ಮಿಳೆಯ ಸ್ವಭಾವವನ್ನು ಮಾಸ್ತಿ ಅವರು ಸಹಜ ಸುಂದರವಾಗಿ ಚಿತ್ರಿಸಿದ್ದಾರೆ.

ಸುಮಿತ್ರೆಯ ಸಂಗಡ ನಂದಿಗ್ರಾಮಕ್ಕೆ ಹೊರಟಿದ್ದ ಊರ್ಮಿಳೆ ಅಂದಿನ ಕರಾಳ ದಿನಗಳನ್ನು ನೆನೆಯುತ್ತಾಳೆ. "ಮೋಡವಿಲ್ಲದ ಗಗನದೊಡಲಿಂದ ಬರಸಿಡಿಲು ಎರಗಿ ಬಂದಂತೆ" ರಾಮ ಕಾಡಿಗೆ ಹೋಗುವ ವಾರ್ತೆ ಬಂದಿತು. ಜೊತೆಗೆ ತನ್ನ ಪತಿಯೂ ರಾಮನೊಡನೆ ಹೋಗುವ ನಿರ್ಧಾರ ತಳೆದಿದ್ದಾನೆ. ಸೀತೆ ಪತಿಯನ್ನು ಅನುಸರಿಸಿದಂತೆ ತಾನೂ ಪತಿಯೊಡನೆ ಹೊರಡುವುದೇ ಸರಿ ಎಂದು ಆಲೋಚಿಸುತ್ತದೆ ಒಂದು ಮನಸ್ಸು. ಆದರೆ ಮರುಗಳಿಗೆಯಲ್ಲೇ ತಾನೂ ಹೊರಟರೆ ಪತಿಗೆ ತಾನು ಹೊರೆಯಾಗುತ್ತೇನೆ ಎಂಬ ಭಾವನೆ ಬರುತ್ತದೆ. ಅದಕ್ಕೆ ಬದಲಿಗೆ ತಾನು ಇಲ್ಲಿಯೆ ಉಳಿದು ಅವರೆಲ್ಲರೂ ಕ್ಷೇಮದಿಂದ ಹಿಂತಿರುಗಲಿ ಎಂದು ಪ್ರಾರ್ಥನೆ ಸಲ್ಲಿಸುವುದೇ ಒಳಿತೆಂದು ಭಾವಿಸುತ್ತಾಳೆ. ಊರ್ಮಿಳೆಯ ಮೌನ ಪ್ರಾರ್ಥನೆ ಹದಿನಾಲ್ಕು ವರ್ಷಗಳ ಕಾಲ ನಿರಂತರವಾಗಿ ನಡೆಯುತ್ತದೆ. ಆ ಅವಧಿಯಲ್ಲಿ ಆಕೆ ನಿದ್ರಿಸಲಿಲ್ಲ. ರಾಮ ಸೀತೆಯರು ಅಯೋಧ್ಯೆಗೆ ಹಿಂತಿರುಗಿದ ಸಮಯದಲ್ಲಿ ಸೀತೆ ಊರ್ಮಿಳೆಯನ್ನು ಕಂಡು ಕನಿಕರಿಸುತ್ತಾಳೆ. ಆದರೆ ಊರ್ಮಿಳೆ ಕೊಡುವ ಉತ್ತರದಲ್ಲಿ ಸೀತೆಯ ಮೇಲಿನ ಆಕೆಯ ಪ್ರೇಮ ವ್ಯಕ್ತವಾಗಿದೆ. ಪತಿಯನ್ನಗಲಿದ ನೋವಿನಲ್ಲಿ, ನಿರಂತರ ನಿರೀಕ್ಷೆಯಲ್ಲಿ ಮೌನಸಾಧನೆಯಲ್ಲಿ ತನ್ನ ಶರೀರ ಕುಂದಿರುವುದು ಆಕೆಗೆ ಗೌಣ.

ಅರಮನೆಯ ಊಟಮಾಡಿ ನಾನು ಸೊರಗಿದೆನು
ಸೆರೆಯ ಹಸಿವಲಿ ನೀನೂ ಸೊರಗಲಿಲ್ಲವೆ
ಅಕ್ಕಾ?
ಎಷ್ಟು ಕಷ್ಟ ಸಿಕ್ಕಿ ಎಷ್ಟು ತೊಳಲಿದೆ ನೀನು
ಏನಾಗಿರುವೆ ನಿನ್ನ ನೋಡಲಾರನೆ ನಾನು

ಎಂದು ಊರ್ಮಿಳೆ ಮರುಗುತ್ತಾಳೆ. ಒಟ್ಟಿನಲ್ಲಿ ಆಕೆಗೆ ಬೇಕಾದದ್ದು, ಎಲ್ಲ ಕಷ್ಟವೂ ಮುಗಿದು ಎಲ್ಲರೂ ಸುಖವಾಗಿ ಹಿಂತಿರುಗಿ ಬರುವುದು. ಅದು ನೆರವೇರಿದಾಗ ಆಕೆಗೆ ಅಪಾರ ಆನಂದವಾಗಿದೆ. ತನ್ನ ಸಂತೋಷವನ್ನು ಸೀತೆಗೆ ತಿಳಿಸಿದಾಗ;

ಅದು ಸರಿ ಎಲ್ಲ ಸುಖವಾಗಿ ಮುಗಿದಿದೆ
ಇದು ನಮ್ಮ ಮನೆತನದ ಸೌಭಾಗ್ಯ ಸಂದೇಹ
ಇಲ್ಲ. ಆದರೆ ಇದಕೆ ನೀನಂದು ಮಾಡಿದ
ಆ ಮಹಾತ್ಯಾಗ ಕಾರಣ ನೀನು ಅದು ಕಾಣೆ

ಎಂದು ಮೆಚ್ಚಿಕೆಯ ಮಾತಾಡುತ್ತಾಳೆ. ಮುಂದೆ ಊರ್ಮಿಳೆ ಮಾಡಿದ ತ್ಯಾಗ ಯಾವುದೆಂಬುದನ್ನು ವಿವರಿಸುತ್ತಾಳೆ. ಅದು ಊರ್ಮಿಳೆಯ ಸ್ವಭಾವದಲ್ಲಿ ಬೆರೆತುಹೋಗಿದ್ದ ಆಕೆಯ ಉದಾರ ಗುಣ, ಸಜ್ಜನಿಕೆ ಸರಳತೆ ಸೌಹಾರ್ದಗಳನ್ನು ಮಾಸ್ತಿಯವರ ಸುಸಂಸ್ಕೃತ ಸೂಕ್ಷ್ಮಪ್ರಜ್ಞೆ ಗ್ರಹಿಸಿ ಚಿತ್ರಿಸಿರುವ ವಿಧಾನ ಅನನ್ಯವಾಗಿದೆ.

ಶ್ರೀನಿವಾಸರ ಶ್ರೀರಾಮ ಪಟ್ಟಾಭಿಷೇಕ, ರಾಮಾಯಣದಲ್ಲಿರುವ ಮಾನವ ಬದುಕಿನ ಮೌಲ್ಯಗಳನ್ನು ಆದರ್ಶಗಳನ್ನು ಅಲ್ಲಿನ ಸನ್ನಿವೇಶಗಳು, ಪಾತ್ರಗಳ ಮೂಲಕ ಸ್ಪಷ್ಟವಾಗಿಸುವ ವಿಶಿಷ್ಟ ಕಲಾಕೃತಿಯಾಗಿದೆ. ಮಾಸ್ತಿಯವರು ತಮ್ಮ ಕಾವ್ಯದ ಪ್ರಾರಂಭದಲ್ಲಿ "ರಾಮಚರಿತವನೊರೆವ ಪಟ್ಟಾಭಿಷೇಕ ಕೃತಿ ಸಿರಿಗನ್ನಡದ ನುಡಿಗೆ ತೊಡವಾಗಿ ಸಂಚರಿಸು" ಎಂದು ಬೇಡಿದ್ದಾರೆ. ಅವರ ಬೇಡಿಕೆ ಫಲಿಸಿ ನಿಜಕ್ಕೂ ಈ ಕೃತಿ ಕನ್ನಡನುಡಿದೇವಿಯ ಕೊರಳಮಾಲಿಕೆಯಲ್ಲಿ ಸೇರಿರುವ ಅಮೂಲ್ಯಕೃತಿಗಳಲ್ಲಿ ಒಂದಾಗಿ ಸದಾ ಬೆಳಗುತ್ತಿರುತ್ತದೆ. ★

# ಸುಗ್ರೀವ ಪಟ್ಟಾಭಿಷೇಕ

ರಾಮ ಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಜಟಾಯು, ಕಬಂಧ, ಶಬರಿಯರನ್ನು ಅನುಗ್ರಹಿಸಿ ಮುಂದೆ ಋಷ್ಯಮೂಕ ಪರ್ವತದ ಸಮೀಪಕ್ಕೆ ಬಂದರು. ಸುಗ್ರೀವನು, ಋಷ್ಯಮೂಕ ಪರ್ವತದಿಂದ ಇವರನ್ನು ನೋಡುವನು. ರಾಮಲಕ್ಷ್ಮಣರ ಕೈಯಲ್ಲಿದ್ದ ಧನುಸ್ಸು ಮತ್ತು ಇತರ ಆಯುಧಗಳನ್ನು ಕಂಡು, ಮಹಾಭಯದಿಂದ ಓಡುವನು. ಅವನ ಮನಸ್ಸು ತಲ್ಲಣಿಸಿತು, ದಿಕ್ಕೇ ತೋರಲಿಲ್ಲ. ಸುತ್ತಲೂ ನೋಡಿದ. ಎಲ್ಲಿಗೆ ಹೋಗುವುದೆಂಬುದೇ ತಿಳಿಯಲಿಲ್ಲ. ಇದ್ದಲ್ಲಿಯೇ ಇರಲು ಧೈರ್ಯವಿಲ್ಲ. ಭಯದಿಂದ ತತ್ತರಿಸಿದ. ಅವರು ಯಾರೋ, ವಾಲಿಯಿಂದ ಪ್ರೇರಿತರಾಗಿ ತನ್ನನ್ನು ಕೊಲ್ಲಲು ಬಂದಿರಬಹುದೆಂದು ಅನುಮಾನಿಸಿದ.

ಆಗ ಅವನ ಮಂತ್ರಿ ಕಡುಜಾಣನೂ, ಮಾತು ಬಲ್ಲವನೂ ಆದ ಹನುಮಂತನು, 'ಹೇ! ಸುಗ್ರೀವರಾಜಾ! ವಾಲಿಯ ಭಯ ಏಕೆ? ಇದು ಋಷ್ಯಮೂಕ ಪರ್ವತವಲ್ಲವೇ? ಮತಂಗಾಶ್ರಮವಲ್ಲವೇ? ವಾಲಿ ಇಲ್ಲಿಗೆ ಬರಲಾರ. ಅವನ ಭಯ ತಪ್ಪಿಸಿಕೊಳ್ಳಲು ತಾನೆ ನಾವು ಇಲ್ಲಿಗೆ ಬಂದುದು? ಹೇ! ಸುಗ್ರೀವಾ! ನಿನ್ನ ಮನಸ್ಸು ಧೃತಿಗೆಟ್ಟಿದೆ. ನೀನು ಚಪಲಚಿತ್ತನಾಗಿರುವೆ. ನಿನ್ನ ಕಪಿಸ್ವಭಾವ ಇದು. ಇಂಗಿತದಿಂದ ಇತರರ ಸ್ವಭಾವ ತಿಳಿಯಬೇಕು. ಬುದ್ಧಿ ಇಲ್ಲದ ರಾಜ, ಪ್ರಜಾಪರಿಪಾಲನೆ ಮಾಡಲಾರ' ಎಂದು ಹೇಳಿದನು.

ಹನುಮಂತನ ಮಾತುಗಳನ್ನು ಕೇಳಿ ಸುಗ್ರೀವನು ಸಮಾಧಾನಹೊಂದಿ, ರಾಮಲಕ್ಷ್ಮಣರ ಬಳಿಗೆಹೋಗಿ, ಅವರು ಒಳ್ಳೆಯವರೋ, ಅಥವ ಕೆಟ್ಟವರೋ ಎಂಬುದನ್ನು ತಿಳಿದುಬರುವಂತೆ ಹನುಮಂತನನ್ನು ಅವರ ಬಳಿಗೆ ಕಳುಹಿಸುವನು. ಹಾಗೆಯೇ ಹನುಮಂತನು ಭಿಕ್ಷುರೂಪತಾಳಿ, ರಾಜಕುಮಾರರ ಬಳಿಗೆ ಬಂದು "ಹೇ! ಮಹಾತ್ಮರೇ! ನಿಮ್ಮ ಇಬ್ಬರದೂ ಒಂದೇ ರೂಪು, ದೇವಲೋಕದಿಂದ ಇಳಿದು ಬಂದಿರುವಿರೋ? ಅಥವ ಸ್ವೇಚ್ಛೆಯಿಂದ ಭೂಲೋಕಕ್ಕೆ ಇಳಿದು ಬಂದ ಸೂರ್ಯಚಂದ್ರರೋ ನೀವು? ನಿಮ್ಮ ಸಿಂಹ ಭುಜ, ನೀಳವಾದ ಕಬ್ಬಿಣದ ಅಗಳಿಯಹಾಗೆ ಭದ್ರವಾದ ದುಂಡುತೋಳು, ನಿಮ್ಮ ಕಮಲದಂತಹ ಕಣ್ಣು - ನೋಡಿದರೆ ನೀವು ಇಡೀ ಭೂಮಂಡಲಕ್ಕೆ ಒಡೆಯರಾಗತಕ್ಕವರಂತೆ ಇರುವಿರಿ. ಇಲ್ಲಿಗೇಕೆ ಬಂದಿರಿ? ನೀವು ಯಾರು?

"ಎಲೈ! ವೀರಶ್ರೇಷ್ಠರೇ! ಸುಗ್ರೀವನೆಂಬ ವಾನರರಾಜ ಇಲ್ಲಿದ್ದಾನೆ. ಅವನು ಮಹಾವೀರ, ಧರ್ಮಪರಾಯಣ. ಅವನ ಅಣ್ಣ ವಾಲಿ, ಅವನಿಂದ ರಾಜ್ಯವನ್ನು ಕಿತ್ತುಕೊಂಡು ಅವನ ಪತ್ನಿಯನ್ನು ಅಪಹರಿಸಿ, ಅವನನ್ನು ಓಡಿಸಿಬಿಟ್ಟಿರುವನು. ರಾಜ್ಯಭ್ರಷ್ಟನಾದ ಸುಗ್ರೀವನು ಈಗ ಇಲ್ಲಿ ಅಲೆಯುತ್ತಿರುವನು. ಆ ವಾನರರ ಅಧಿಪತಿಯಾದ ಸುಗ್ರೀವನು ನನ್ನನ್ನು ಇಲ್ಲಿಗೆ ಕಳುಹಿಸಿರುವನು. ನನ್ನ ಹೆಸರು ಹನುಮಂತ. ನಾನು ಸುಗ್ರೀವನ ಮಂತ್ರಿ. ಅವನಿಗೆ ಒಳ್ಳೆಯದನ್ನು ಮಾಡಬೇಕೆಂದು ಭಿಕ್ಷುರೂಪತಾಳಿ ಇಲ್ಲಿಗೆ ಬಂದಿರುವೆನು. ನಾನು ಕಾಮರೂಪಿ. ಇಷ್ಟಬಂದ ರೂಪದಿಂದ, ಇಷ್ಟಬಂದ ಕಡೆ ಹೋಗಬಲ್ಲೆ. ನಮ್ಮ ದೊರೆ ಸುಗ್ರೀವನಿಗೆ ನಿಮ್ಮ ಸ್ನೇಹ ಮಾಡಬೇಕೆಂಬ ಆಸೆ ಉಂಟು. ಅದಕ್ಕಾಗಿ ನನ್ನನ್ನು ನಿಮ್ಮ ಬಳಿಗೆ ಕಳುಹಿಸಿರುವನು" ಎಂದು ಹೇಳಿದ ನುಡಿಜಾಣ ಹನುಮಂತ.

ಶ್ರೀರಾಮನು ಹನುಮಂತನ ಮಾತು ಕೇಳಿ ಅತ್ಯಂತ ಹರ್ಷಿತನಾಗಿ 'ಹೇ! ಲಕ್ಷ್ಮಣಾ! ಸುಗ್ರೀವನ ಸಚಿವ ಹನುಮಂತನು ಬಂದಿರುವನು. ಸುಗ್ರೀವನನ್ನು ನೋಡಬೇಕೆಂದು ನಾವೂ ಇಲ್ಲಿಗೆ ಬಂದಿರುವೆವು. ದೈವವಶದಿಂದ ಸುಗ್ರೀವನೇ ಇಲ್ಲಿರುವನು. ಹನುಮಂತನು ಮಾತಿನಲ್ಲಿ ಬಲು ಜಾಣ. ಇವನು ಋಗ್, ಯಜಸ್ಸು, ಸಾಮವೇದಗಳನ್ನು ಅಧ್ಯಯನಮಾಡಿರಬೇಕು. ಇಷ್ಟು ಹೊತ್ತು ಮಾತನಾಡಿದರೂ ಒಂದು ಅಪಶಬ್ದವಿಲ್ಲ. ವ್ಯಾಕರಣಬದ್ಧವಾಗಿದೆ. ಇವನು ಈ ಶಾಸ್ತ್ರದಲ್ಲಿ ಮಹಾ ಪಂಡಿತನಾಗಿರಬೇಕು. ಮಾತನಾಡುವಾಗ, ಮುಖದಲ್ಲಿ, ಕಣ್ಣಿನಲ್ಲಿ,



ವಾಲಿ ಸುಗ್ರೀವ ಕದನ ಶಿಲ್ಪ.

ಶ್ರೀ ಡಿ. ಕೃಷ್ಣಯ್ಯಂಗಾರ್

ಕಣ್ಣು ಬೊಂಬೆಯುಲ್ಲಿ ಸ್ವಲ್ಪ ದೋಷವೂ ಕಾಣಲಿಲ್ಲ. ಮಾತಿನಲ್ಲಿ ಮಂದವೂ ಇಲ್ಲ. ವೇಗವೂ ಇಲ್ಲ. ಬಹು ಗಂಭೀರ. ಮಾತಿನಲ್ಲಿ ಶಬ್ದಾಡಂಬರವಾಗಲಿ, ಸಂದೇಹವಾಗಲಿ ಇಲ್ಲ. ಇಂತಹ ಗುಣಶಾಲಿ, ಕಾರ್ಯಸಾಧಕ ದೂತನಿದ್ದರೆ ರಾಜನ ಕೆಲಸ ಕೈಗೂಡುತ್ತದೆ. ಇವನಿಗೆ ಸೂಕ್ತನಾದ ಉತ್ತರವನ್ನು ನೀನೇ ತಿಳಿಸು' ಎಂದನು ಶ್ರೀರಾಮ.

ಇಂಗಿತಜ್ಞನಾದ ಲಕ್ಷ್ಮಣನು, ತಮ್ಮ ವಿಚಾರವನ್ನು ಹನುಮಂತನಿಗೆ ಹೀಗೆ ತಿಳಿಸುವನು. "ಹನುಮಂತಾ, ರಾಮನು ದಶರಥರಾಜನ ಮಗ. ಯಾರ ಅನುಗ್ರಹಕ್ಕಾಗಿ ಮೂರು ಲೋಕವೂ ಸದಾ ಕಾಯುತ್ತಿದೆಯೋ, ಅಂತಹ ರಾಮನು ಈಗ ಸುಗ್ರೀವನ ಅನುಗ್ರಹಕ್ಕಾಗಿ ಬಂದಿರುವನು. ಗುಣವಂತರಾದ ರಾಜರನ್ನೆಲ್ಲ ಕಾಪಾಡಿದ ನಾಥ, ಈಗ ಸುಗ್ರೀವನನ್ನು ನಾಥನನ್ನಾಗಿ ಮಾಡಿಕೊಳ್ಳಲು ಬಂದಿರುವನು. ಹೆಂಡತಿಯನ್ನು ಕಳೆದುಕೊಂಡ ದುಃಖದಿಂದ ಬಾಧೆ ಪಡುತ್ತಿರುವ ಶ್ರೀರಾಮನ ಕೈಯ್ಯನ್ನು ಸುಗ್ರೀವನು ಹಿಡಿದು ಸ್ನೇಹಮಾಡಿಕೊಳ್ಳಬೇಕು."

ಲಕ್ಷ್ಮಣನ ದೈನ್ಯದ ಮಾತುಗಳನ್ನು ಕೇಳಿ ಹನುಮಂತನು ತನ್ನ ಭಿಕ್ಷುರೂಪವನ್ನು ಬಿಟ್ಟು ನಿಜರೂಪವನ್ನುತಾಳಿ, ರಾಮ ಲಕ್ಷ್ಮಣರನ್ನು ತನ್ನ ಭುಜದಮೇಲೆ ಕೂರಿಸಿಕೊಂಡು ಸುಗ್ರೀವನ ಬಳಿಗೆ ಬಂದು, ಅವರ ವಿಚಾರವನ್ನೆಲ್ಲ ತಿಳಿಸುವನು. ಆಗ ಸುಗ್ರೀವನ ಭಯ ಹೋಗಿ ಅವನಿಗೆ ಸಂತೋಷವಾಯಿತು. ಅವನು ಶ್ರೀರಾಮನ ಕೈಹಿಡಿದು, ಪರಸ್ಪರ ಪ್ರೀತಿಯಿಂದ, ಅಗ್ನಿ ಸಾಕ್ಷಿಯಾಗಿ ಸ್ನೇಹ ಮಾಡಿಕೊಂಡರು.

ಸುಗ್ರೀವನ ಆನಂದಕ್ಕೆ ಪಾರವೇ ಇಲ್ಲ. ಆನಂದ ಬಾಷ್ಪಗಳನ್ನು ಸುರಿಸುತ್ತ, 'ಹೇ! ಶ್ರೀರಾಮ! ನನ್ನ ಅಣ್ಣ ನನಗೆ ಮೋಸ ಮಾಡಿ, ರಾಜ್ಯದಿಂದ ಓಡಿಸಿದ್ದಾನೆ. ನನ್ನ ಹೆಂಡತಿಯನ್ನು ಅಪಹರಿಸಿದ್ದಾನೆ. ಅವನ ಭಯದಿಂದ ಕಾಡಿನಲ್ಲಿ ನಾನು ಅಲೆಯುತ್ತಿದ್ದೇನೆ. ನನಗೆ ನೀನೇ ದಿಕ್ಕು. ನನಗೆ ಅಭಯನೀಡಿ ಕಾಪಾಡು' ಎಂದು ಹೇಳಿದನು. ಆಮೇಲೆ ಶ್ರೀರಾಮನು ತಾನು ವಾಲಿಯನ್ನು ಕೊಲ್ಲುವುದಾಗಿಯೂ, ಕಿಷ್ಕಿಂಧಾ ರಾಜ್ಯವನ್ನು ಸುಗ್ರೀವನಿಗೆ ಕೊಡುವುದಾಗಿಯೂ ಪ್ರತಿಜ್ಞೆ ಮಾಡಿದನು. ವಾಲಿಯೊಡನೆ ಯುದ್ಧ ಮಾಡುವಂತೆ ಸುಗ್ರೀವನಿಗೆ ಧೈರ್ಯ ಹೇಳಿದನು ಶ್ರೀರಾಮ.

ವಾಲಿ,ಸುಗ್ರೀವರಿಗೆ ಯುದ್ಧವಾಗುವುದು. ಮೊದಲನೆಯದಿನ ಸುಗ್ರೀವ ಸೋತರೂ, ಮಾರನೆಯದಿನ,ಶ್ರೀರಾಮನು, ವಾಲಿಯನ್ನು ತನ್ನ ತೀಕ್ಷ್ಣ ಬಾಣಗಳಿಂದ ಹೊಡೆದು ಕೆಡಹುವನು. ರಾಮಲಕ್ಷ್ಮಣರು ಹತ್ತಿರ ಬಂದಾಗ, ವಾಲಿಯು "ಅಯ್ಯಾ ರಾಮ!

(26ನೇ ಪುಟ ನೋಡಿ)

# ವಿಯೋಗ ವಿಭಾವರಿ

ಮೂಲ : ಶ್ರೀ ನಾಯನಿ ಕೃಷ್ಣ ಮೂರ್ತಿ.

ಅನುವಾದ : ಶ್ರೀಮತಿ ಬಿ. ರುಕ್ಮಿಣಿ.

| | |
|---|---|
| ಮಂಥರೆ : | ಮುದುಕಿ, ಕೈಕೇಯಿಗೆ ದಾಸಿ, ಕೈಕೇಯಿಯ ಅರಮನೆಯಲ್ಲಿ ಸಲಿಗೆ, ಸ್ವಾತಂತ್ರ್ಯ ಇರುವಂಥ ಹೆಣ್ಣು. |
| ಸೇವಕಿ : | ಸಾಮಾನ್ಯ ಪರಿಚಾರಿಕೆ. |
| ಕೈಕೇಯಿ : | ಹೆಡೆ ಎತ್ತಿದ ನಾಗರ ಹಾವಿನ ಸ್ವರೂಪ, ಮಹಾರಾಣಿಗೆ ಇರಬೇಕಾದಂಥ ದರ್ಪ, ಅಟ್ಟಹಾಸ ಇರುವಂಥ ಹೆಣ್ಣು. |
| ದಶರಥ : | ಮುದುಕ ಮಹಾರಾಜ; ತಲೆ ನರೆತಿರುತ್ತದೆ. |
| ಸುಮಂತ್ರ : | ದಶರಥನ ಅಂತರಂಗಿಕ, ಮಂತ್ರಿಗೆ ತಕ್ಕ ವ್ಯಕ್ತಿತ್ವ, ಎಲ್ಲರಿಗೂ ಬುದ್ಧಿ ಹೇಳುವ ಸ್ವೇಚ್ಛಾಸ್ವಾತಂತ್ರ್ಯ ಇರುವುದು |
| ಶ್ರೀ ರಾಮ : | ಎಳೆವಯಸ್ಸಿನ ರಾಜಕುಮಾರ. |
| ಸೀತೆ : | ಮುಗ್ಧೆ, ಲಾವಣ್ಯವತಿ. |

ಅಯೋಧ್ಯಾನಗರಕ್ಕೆ ರಾಜ ದಶರಥ. ಆ ಮಹಾರಾಜ ಒಂದು ದಿನ ತನ್ನ ವೃದ್ಧಾಪ್ಯವನ್ನು ನೆನೆದು, ತನಗೆ ಕಾಲವು ಸಮೀಪಿಸುತ್ತಿರುವುದನ್ನು ತಿಳಿದು ರಾಜ್ಯಕ್ಕೆ ವಾರಸನಾದ ಶ್ರೀರಾಮಚಂದ್ರನಿಗೆ ಯುವರಾಜ ಅಭಿಷೇಕಮಾಡಿ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದ. ಯೋಚನೆ ಬಂದಿದ್ದೇ ತಡ; ತನ್ನ ಮಂತ್ರಿಗಳನ್ನು ಕರೆಯಿಸಿ ವಿಷಯ ಚರ್ಚಿಸಿದ. ಸಾಮಂತ ರಾಜರಿಗೆಲ್ಲಾ ವರ್ತಮಾನ ಕಳಿಸಿದ. ಎಲ್ಲರೂ ರಾಮ ತಮಗೆ ರಾಜನಾಗುವುದು ತಮ್ಮ ಅಭೀಷ್ಟವೆಂದು ತಿಳಿಸಿದರು. ಜನಕ ಮಹಾರಾಜ, ಕೇಕೇಯರಾಜ ತುಂಬಾ ದೂರದಲ್ಲಿರುವುದರಿಂದ ಈ ವಿಷಯ ಅವರಿಗೆ ತಿಳಿಯಲಿಲ್ಲ.

ಮಂತ್ರಿ, ಸಾಮಂತರಾಜರು ಎಲ್ಲರೂ ಸರ್ವಜನೋಭೀಷ್ಟನಾದ ರಾಮನ ಪಟ್ಟಾಭಿಷೇಕದ ತಯಾರಿ ನಡೆಸುತ್ತಿದ್ದರು.

ರಾಜ್ಯ ಜ್ಯೇಷ್ಠ ಪುತ್ರನಿಗೆ ಸೇರತಕ್ಕದ್ದು. ಈ ಸತ್ಯ ತಿಳಿದಿದ್ದರೂ ಒಟ್ಟಿಗೆ ಹುಟ್ಟಿ, ಬೆಳೆದ ತಮ್ಮಂದಿರನ್ನು ಬಿಟ್ಟು ತಾನು ರಾಜ್ಯಾಭಿಷಿಕ್ತನಾಗುವುದು ರಾಮನಿಗೆ ತುಂಬಾ ವ್ಯಥೆಯಾಗತೊಡಗಿತು. ಆದರೆ ತಂದೆ ಆಜ್ಞೆ ಶಿರೋಧಾರ್ಯವೆಂದು ಒಪ್ಪಿಗೆ ಸೂಚಿಸಿದ.

ಆ ದಿನ ಎಲ್ಲರಿಗೂ ಕತ್ತಲಿರುವಾಗಲೇ ಬೆಳಗಾಯ್ತು. ಎಲ್ಲರ ಮನೆಬಾಗಿಲಲ್ಲಿ ಮುತ್ತು ರತ್ನಗಳಿಂದ ರಂಗೋಲೆ ಶೋಭಿಸಿತು. ಪಟ್ಟಣದ ಜನರೆಲ್ಲಾ ಆನಂದಸಾಗರದಲ್ಲಿ ತೇಲಿಹೋದಂತೆ ಭಾಸವಾಗುತ್ತಿತ್ತು.

ದೇವತೆಗಳು ಶ್ರೀರಾಮನ ಪಟ್ಟಾಭಿಷೇಕವನ್ನು ನೋಡುವುದು ಸಹಿಸದಾದರು. ವಿಘ್ನಗಳನ್ನು ಕಲ್ಪಿಸೆಂದು ಶಾರದೆಯನ್ನು ಬೇಡಿದರು. ಶಾರದೆ, ಮಂಥರೆಯೆನ್ನುವ ದಾಸಿಯ ಬುದ್ಧಿಯನ್ನು ಕೆಡಿಸಿದಳು. ಕೈಕೇಯಿ ರಾಮನ ಮಲತಾಯಿ. ಕೈಕೇಯಿಯ ದಾಸಿ ಮಂಥರೆ. ಇವಳು ಅತ್ಯಂತ ಹತ್ತಿರದವಳು ಕೈಕೇಯಿಗೆ.

ಸ್ಥಳ : ಕೈಕೇಯಿಯ ಶಯನ ಮಂದಿರ. ರಂಗ ಮಂಟಪದ ಎಡಗಡೆ ಹಂಸತೂಲಿಕಾ ತಲ್ಪದಲ್ಲಿ ಕೈಕೇಯಿ ಮಲಗಿರುತ್ತಾಳೆ. ಆಕೆಗೆ ಸೇವೆ ಮಾಡುತ್ತಾ ಒಬ್ಬ ದಾಸಿ ಇರುತ್ತಾಳೆ.

ಹಿನ್ನೆಲೆಯಲ್ಲಿ ಮಹಾರಾಣಿಗೆ ಜೋಗುಳ ಹೇಳುವಂತೆ ಮಧುರವಾದ ಒಂದು ಧ್ವನಿ ಸಣ್ಣಗೆ ಕೇಳಿಸುತ್ತಾ ಇರುತ್ತದೆ.

ಮಂಥರೆ : (ಬಲದ್ವಾರದಿಂದ ಪ್ರವೇಶ. ಅಯ್ಯೋ, ಅಯ್ಯೋ ಎನ್ನುತ್ತ ಶೋಕಿಸುತ್ತಾ ಒಳಗಡೆ ಬರುವಳು. ಕೈಯಲ್ಲಿದ್ದ ನಾರುಮಡಿಯ ಗಂಟನ್ನು ಒಂದು ಮೂಲೆಗೆಸೆದು ಆರ್ಭಟ ಮಾಡುತ್ತಾ ಬರುವಳು.)

ಅಪ್ಪಾ ಭರತಾ! ; ಎಲ್ಲಿದ್ದೀಯೋ? ನಿನಗೆಂಥ ಕಷ್ಟ ಬಂತಲ್ಲೋ ನನ್ನಪ್ಪಾ! ಈ ಮುಪ್ಪಿನಲ್ಲಿ ನಾನೆಂಥಾ ನಿಕೃಷ್ಟ ಬಾಳು ಬಾಳಬೇಕೋ ಏನೋ? ಅಮ್ಮಾ... ಕೈಕೇಯಿ ತಾಯಿ ನಿನ್ನ ನಿದ್ರೆ ಸಾಕುಮಾಡು ತಾಯಿ. ಅಯ್ಯೋ...ಅಯ್ಯೋ ಇಷ್ಟೆಲ್ಲಾ ಆಗ್ತಾ ಇದ್ರೂ ನೀನು ನಿಶ್ಚಿಂತೆಯಾಗಿ ನಿದ್ರೆ ಮಾಡ್ತಾ ಇದ್ದೀಯಾ ತಾಯಿ, ಎಂಥಾ ಅನ್ಯಾಯಕಳೆ ತಾಯಿ.

ದಾಸಿ : ಷ್; ಮೆತ್ತಗೆ ಮಾತಾಡು, ಮಹಾರಾಣಿಯವರು ನಿದ್ರೆ ಮಾಡ್ತಾ ಇದ್ದಾರೆ.

ಮಂ : ಹೋಗೇ ನಿನ್ನ ಅಧಿಕಾರಕ್ಕಿಷ್ಟು ಬೆಂಕಿ ಬೀಳ. ಮಹಾರಾಣಿಯವರ ಪರಿಚಾರಕಳೆಂದು ಬಿನ್ನಾಣ ಮಾಡ್ತಾ ಇದ್ದಿಯೇನೇ? ಮಹಾರಾಣಿ ಯಾರೆ? ಈ ನಿರ್ಭಾಗ್ಯಳು, ಈ ಕೈಕೇಯಿ, ಮಹಾರಾಣಿ ಅಂತ ಅಂದುಕೊಂಡಿದ್ದೀಯೇನು?

ದಾಸಿ : ಮಂಥರೆ, ಗಲಾಟೆ ಮಾಡಬೇಡ. ದೇವಿಯವರು ನಿದ್ರೆಮಾಡ್ತಾ ಇರುವುದು ಕಾಣುತ್ತಿಲ್ಲವೇ?

ಮಂ : ನೋಡು ನೋಡು ಆ ಮಾತೇ ಅನ್ನಬೇಡ. ನಿನ್ನ ದೇವೇರಿ ಕಾವೇರಿಯಲ್ಲಿ ಬೀಳೋ ಸಮಯ ಕಾದಿದೆ. ಮೊದಲು ಆ ಮಹಾತಾಯಿಯನ್ನು ನಿದ್ರೆಯಿಂದ ಎಚ್ಚರಿಸು. ಕೈಕೇಯಿಯ ಆಪ್ತದಾಸಿ ಈ ಮಂಥರೆಗೆ ಹೇಗೆ ನಡೆದುಕೋಬೇಕು ಅಂತ ಹೇಳುವಷ್ಟು ದೊಡ್ಡವಳಾದೆಯೋ ನೀನು? (ಕೈಕೇಯಿಯ ಕಡೆಗೆ ತಿರುಗಿ) ಅಮ್ಮಾ ಕೈಕೇಯಿ; ನಿದ್ರೆಯಿಂದ ಏಳಮ್ಮಾ ಎಲ್ಲರಿಗೂ ಬೆಳಗಾಗಿದೆ. ನಿನ್ನ ಮುಖಕ್ಕೆ ಮಾತ್ರ ಅಮಾವಾಸ್ಯೆಚಂದ್ರ ಕಾದಿದ್ದಾನೆ.

ಕೈಕೇಯಿ : (ಹಾಸಿಗೆ ಮೇಲೆ ಹೊರಳಾಡುತ್ತಾ ಕಣ್ಣು ಉಜ್ಜಿಕೊಳ್ಳುತ್ತಾ ನಿದ್ರೆಯಿಂದೆದ್ದು ಹಾಸಿಗೆಯ ಮೇಲೆ ಒರಗಿ ಕೂತುಕೊಳ್ಳುತ್ತಾ ನಗುತ್ತಾ) ಏನೇ... ಮಂಥರೆ ಆಗಲೇ ಬೆಳಗಾಯ್ತೇನೇ ನಿನಗೆ. ನಿದ್ರೆಯಿಂದೇಳುತ್ತಲೇ ಏನೋ ಬೆಟ್ಟಬಿದ್ದು ಮೇಲೆ ಬಿದ್ದಹಾಗೆ ಓಡುತ್ತಾ ಹೀಗೆ ಬಂದೆಯಲ್ಲಾ? ಏನೋ ಮಾಡಿರ್ತೀ, ಅದಕ್ಕೆ ಲಕ್ಷ್ಮಣ ನಿನ್ನನ್ನು ಶಿಕ್ಷಿಸಿರುತ್ತಾನೆ. ಹೌದಾ?

ಮಂ : (ಅವಳ ಮಾತಿಗೆ ಗಮನಕೊಡದೆ ಹೋ ... ಅಂತ ಶೋಕಾಲಾಪನೆ ಮಾಡ್ತಾಳೆ.)

(ಹೆದರಿಕೊಳ್ಳುತ್ತಾ ಮೇಲೆದ್ದು) ಏನೇ... ಏನಾಗಿದೆ? ಏನೂ ಹೇಳದೇ ಹೀಗೇಕೆ ಗೋಳಾಡ್ತಿ? (ಮಂಥರೆ ಮಾತಾಡದಿದ್ದಾಗ) ಹೇಳೇ ಮಂಥರೆ ಏನಾಗಿದೆ? ನಿಮ್ಮ ಮಹಾರಾಜರು ಕ್ಷೇಮವೇ? ರಾಮ ಲಕ್ಷ್ಮಣ, ಭರತ, ಶತ್ರುಘ್ನರು ಕ್ಷೇಮವಾಗಿದ್ದಾರೆ ತಾನೇ? (ಮುಂದಿನ ಪುಟ ನೋಡಿ)

ಮಂ : (ಕೈಸನ್ನೆಯಿಂದ ದಾಸಿಯನ್ನು ಹೊರಗೆ ಹೋಗುವಂತೆ ಹೇಳುವಳು) ಅಮ್ಮಾ ಕೈಕೇಯಿತಾಯಿ; ನಿನಗೆ ಹೇಗೆ ಹೇಳ ಬೇಕೋ ಬಾಯಿ ಬರ್ತಾ ಇಲ್ಲಾ. ನೀನು ಕೇಳಿದವರಿಗಾರಿಗೂ ಪ್ರಮಾದವಿಲ್ಲ. ಆದರೆ ಅದಕ್ಕೂ ಹಿರಿದಾದ ಪ್ರಮಾದ ಸಂಭವಿಸಲಿಕ್ಕಿದೆ. ನೀನು ಶುದ್ಧ ಅಮಾಯಕಳು, ಕಪಟ, ಮೋಸ ಒಂದೂ ತಿಳಿಯದವಳು. ಒಂದು ಒಳ್ಳೆ ಮಾತಾಡಿದರೆ ಸಾಕು ಬಿಟ್ಟದಷ್ಟು ಸಂತೋಷಪಡುವೆ. ನನ್ನ ಗಂಡ ಯಾವಾಗಲೂ ಧರ್ಮದೇವತೆ ಅಂತ ಅಂದುಕೊಂಡಿದ್ದಿಯಲ್ಲಾ. ಆತ ಧರ್ಮದೇವತೆ ಆಗಿದ್ದು ಕರ್ಮದೇವತೆ ಆಗಿದ್ದು ಈಗಾಗಲೇ ಗೊತ್ತಾಗಲಿದೆ. ಅಮ್ಮಾ ಕೈಕೇಯಿತಾಯಿ, ನಡೆದ ವಿಷಯ ಹೇಳ್ತಾ ಇದ್ದೀನಿ.

ಕೈ : (ಬೇಸರಿಸಿಕೊಳ್ಳುತ್ತಾ) ನಿನ್ನ ಹಾಳುಪುರಾಣ ಸಾಕುಮಾಡಿ, ನಡೆದ ವಿಷಯವೇನೋ ಹೇಳು.

ಮಂ : ಆ ಹಾಳು ಮಾತು ನನ್ನ ಹೇಗೆ ಹೇಳು ಅಂತಿಯಾ, ಆ ರಾಮನಿಗೆ ಪಟ್ಟಾಭಿಷೇಕ ಮಾಡಿ......

ಕೈ : (ಸಂತೋಷದಿಂದ ಕುಪ್ಪಳಿಸುತ್ತಾ) ಎಷ್ಟು ಒಳ್ಳೆ ಸುದ್ದಿ ಹೇಳಿದೆಯಲ್ಲೇ ಮಂಥರೆ, (ಕೊರಳಲ್ಲಿರುವ ತನ್ನ ಒಂದು ಸರ ತೆಗೆದು) ಈ ಮುತ್ತಿನ ಸರ ಬಹುಮಾನವಾಗಿ ತೆಗೆದುಕೋ (ಮಂಥರೆ ಕೊರಳಿಗೆ ಸರವನ್ನು ಹಾಕಲು ಹೋಗುವಳು).

ಮಂ : (ಕೈಕೊಸರಿಕೊಳ್ಳುತ್ತಾ ಕೈಕೇಯಿ ಕೊಟ್ಟ ಹಾರವನ್ನು ಕಿತ್ತೆಸೆಯುತ್ತಾಳೆ) ನಿನಗೆ ಸ್ವಲ್ಪಕೂಡಾ ತಿಳಿವಳಿಕೆ ಇಲ್ಲ, ಎದೆ

(25ನೇ ಪುಟ ನೋಡಿ)

# ಜೈನ ರಾಮಾಯಣದ ರಾವಣನ ಧರ್ಮ ಅಧರ್ಮ

ಸಾಮಾನ್ಯವಾಗಿ ಭಾರತೀಯ ಸಾಹಿತ್ಯವೆಲ್ಲವೂ ಸುಖಾಂತವಾಗಿ ಕೊನೆಗೊಳ್ಳುವುದು ಇಲ್ಲಿಯ ಧರ್ಮ–ಸಂಸ್ಕೃತಿಗೆ ಒಗ್ಗಿಕೊಂಡು ಬಂದಂತಿದೆ. ಜೈನಸಾಹಿತ್ಯ ವಾಙ್ಮಯವೂ ಇದಕ್ಕೆ ಹೊರತಲ್ಲ. ಆದರೂ ವಿಧಿಯಕಾರಣದಿಂದ ಉದಾತ್ತ ಗುಣದ ವ್ಯಕ್ತಿಗಳೂ, ಪಾಪಕರ್ಮಕ್ಕೆ ತೊಡಗಿ, ಬದುಕಿನ ಏಳು-ಬೀಳುಗಳಲ್ಲಿ ತೊಳಲಾಡಿ, ಅವರ ಕರ್ಮಪಾಕಕ್ಕೆ ತಕ್ಕ ಫಲವನ್ನು ಅನುಭವಿಸಬೇಕಾಗುತ್ತದೆ. ಇಂಥ ದುರಂತ, ವ್ಯಕ್ತಿಯ ಯಾವುದೋ ಒಂದು ದೌರ್ಬಲ್ಯದಿಂದ ಉಂಟಾಗುವಂಥದು. ಇದಕ್ಕೆ ಉದಾಹರಣೆಯಾಗಿ ಪಂಪನ ಕರ್ಣ, ರನ್ನನ ದುರ್ಯೋಧನ ಹಾಗೂ ನಾಗಚಂದ್ರನ ರಾವಣನ ಪಾತ್ರಗಳನ್ನು ಹೆಸರಿಸಬಹುದು. ಗ್ರೀಕ್ ಸಾಹಿತ್ಯದಲ್ಲಿ–ಅದರಲ್ಲೂ ನಾಟಕಗಳಲ್ಲಿ–ವಿಧಿಯ ಕಾರಣದಿಂದಾಗಿ, ವ್ಯಕ್ತಿಯೊಬ್ಬನ ದೌರ್ಬಲ್ಯವೇ ಕಾರಣವಾಗಿ, ದುರಂತದಲ್ಲಿ ಮುಕ್ತಾಯವಾಗುತ್ತದೆ.

ಕನ್ನಡ ಸಾಹಿತ್ಯದಲ್ಲಿ ಗ್ರೀಕ್ ದುರಂತ ಕಲ್ಪನೆಯ, ಮಾದರಿಯನಾಯಕನೊರ್ವನನ್ನು ನಾಗಚಂದ್ರನ ರಾಮಚಂದ್ರ ಚರಿತ ಪುರಾಣದ ರಾವಣನ ಪಾತ್ರದಲ್ಲಿ ಕಾಣಬಹುದಾಗಿದೆ. ಭಾರತೀಯ ಸನಾತನಗ್ರಂಥವಾದ ರಾಮಾಯಣದಲ್ಲಿ ರಾವಣ ಪಾತ್ರ ಕ್ರೂರತ್ವದ ಪರಮಾವಧಿಯನ್ನು ಮುಟ್ಟಿದೆ. ವಾಲ್ಮೀಕಿ ಸೃಷ್ಟಿಸಿದ ರಾವಣ ಕ್ರೂರ,ದುಷ್ಟ, ಲೋಕ ಕಂಟಕ, ಪರಸ್ತ್ರೀ ಕಾಮುಕನಾಗಿ ರಾಕ್ಷಸನೆನಿಸಿದ್ದಾನೆ. ಇಂಥ ಅವನ ಗುಣಕ್ಕೆ ಕಾರಣವನ್ನು ಸಮಗ್ರವಾಗಿ ರಾಮಾಯಣದಲ್ಲಿ ಕಾಣಲಾರೆವು. ಜೊತೆಗೆ ರಾವಣನ ಉದಾತ್ತತೆಯ ಬಗ್ಗೆಯೂ ಆದಿಕವಿ ಅಲ್ಲಲ್ಲಿ ಸೂಚಿಸಿದ್ದಾನೆ. ವಾಲ್ಮೀಕಿ ರಾಮಾಯಣದ ರಾವಣನ ಶಿವನಿಷ್ಠೆ, ಪರಾಕ್ರಮ, ಆಡಳಿತದಕ್ಷತೆ, ಮುಂತಾದವುಗಳ ಬಗ್ಗೆ ಸಿಗುವ ಕಿಂಚಿತ್ ಪ್ರಮಾಣಗಳನ್ನೆ ಆಧರಿಸಿ ರಾವಣನ ಮನೋಸ್ಥಿತಿಯನ್ನು ವಿಶ್ಲೇಷಿಸಿ, ಅವನ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದು ಪ್ರದರ್ಶಿಸಿದವರು ಜೈನ ಕವಿಗಳು. ವಿಮಲಸೂರಿ, ರವಿಷೇಣರ ಕೃತಿಗಳಲ್ಲಿ ಬೆಳೆದು ಬಂದ ರಾವಣನ ಉದಾತ್ತ ಗುಣಗಳನ್ನು, ಹೆಚ್ಚು ಉಜ್ವಲಗೊಳಿಸಿ ತನ್ನ ಚಂಪೂ ಕಾವ್ಯದಲ್ಲಿ ಕಂಡು–ಕಡೆದ ಕನ್ನಡ ಕವಿ, ನಾಗಚಂದ್ರನ ರಾವಣ 'ಸಕಲಗುಣ ಸಂಪನ್ನ ಏಕ ಗುಣಹೀನ'ನೆನಿಸಿ ವಿಧಿಯ ಹೊಡೆತಕ್ಕೆ ಸಿಕ್ಕುತ್ತಾನೆ. ಸಂಪನ್ನ ನಾಯಕ ದುರಂತಸಾವನ್ನು ಅಪ್ಪುತ್ತಾನೆ. ರಾವಣನಲ್ಲಿ ಇದ್ದ ಜಿನಭಕ್ತಿ, ಪ್ರತಾಪ, ಗಂಡಗರ್ವ, ಪರಾಂಗನಾ ವಿರತಿವ್ರತ, ಉದಾರತೆ, ಕ್ಷಮಾಗುಣ, ಗುರು–ಹಿರಿಯಭಕ್ತಿ ಉಪಾಧೇಯ. ಈತ ಸಮುದ್ರದಂತೆ ಗಾಂಭೀರ್ಯ ಉಳ್ಳವನು, ಶಾಂತಸ್ವಭಾವಿ, ಸತ್ಕುಲ ಪ್ರಸೂತ, ಇವನು ರಾಕ್ಷಸನಲ್ಲ. ಇವನಿಗೆ ಹತ್ತುತಲೆಗಳಿಲ್ಲ, ತನ್ನ ಶೌರ್ಯ, ಪ್ರತಾಪಗಳನ್ನು ತೋರಲು ದಿಗ್ವಿಜಯ ಹೊರಡುತ್ತಾನೆಯೇ ವಿನಾ ಲೋಕ ಕಂಟಕನಾಗಿ ಅಲ್ಲ. ತಾನೆ ಗೆದ್ದು ಸೆರೆಹಿಡಿದ ರಾಜರನ್ನೆಲ್ಲಾ ದಯೆತೋರಿ ಬಿಡುಗಡೆಮಾಡುವ ಕ್ಷಮಾಶೀಲ. ಸಹಸ್ರಭಾನು, ಇಂದ್ರ, ನಳಕೂಬರ ಮೊದಲಾದವರನ್ನು ಪರಾಭವಗೊಳಿಸಿದರೂ ಉದಾರತೆಯಿಂದ ಅವರ ರಾಜ್ಯವನ್ನು ಅವರಿಗೇ ಕೊಡುತ್ತಾನೆ. 'ಅಹಿಂಸೆ' ಇವನ ವ್ರತವಾದ್ದರಿಂದ ಯಜ್ಞ–ಯಾಗಾದಿಗಳು ನಡೆಯದಂತೆ ತಡೆಯುತ್ತಾನೆ. ಅವನ ಅಂತಃಪುರದ ಸ್ತ್ರೀಯರು ಸಾಹಸಕ್ಕೆ ಸೌಂದರ್ಯಕ್ಕೆ ಒಲಿದು ಬಂದಿದ್ದವರೇ ವಿನಾ ಯಾರನ್ನೂ ಬಲಾತ್ಕರಿಸಿ ತಂದವನಲ್ಲ. ಅದಕ್ಕಾಗೇ 'ಪರಾಂಗನಾವಿರತಿ ವ್ರತ'ವನ್ನು ಈತ ಕೈಗೊಂಡಿದ್ದಾನೆ.

ಇಷ್ಟೇ ಅಲ್ಲದೆ ಇವನ ಶುದ್ಧ ಚಾರಿತ್ರ್ಯಕ್ಕೆ ಕನ್ನಡಿ ಹಿಡಿಯುವ ಸಂದರ್ಭವೆಂದರೆ ನಳಕೂಬರನ ಹೆಂಡತಿ ಉಪರಂಭೆಯ ಸನ್ನಿವೇಶ. ಈಕೆ ರಾವಣನನ್ನು ತಂತಾನೆ ಒಲಿದು ಬರುತ್ತಾಳೆ. ದುರ್ಭೇದ್ಯವಾದ ದುರ್ಲಂಘ್ಯಪುರವನ್ನು ಜಯಿಸುವ ತಂತ್ರವನ್ನು ಅವಳಿಂದ ತಿಳಿಯಲು ಪ್ರೇಮದ ನಾಟಕವಾಡುತ್ತಾನೆ. ಕೋಟೆಯನ್ನು ಗೆದ್ದು ಉಪರಂಭೆಗೆ ನೀತಿಯ ಉಪದೇಶಮಾಡಿ ತನ್ನ ಶುಚಿಶೀಲವನ್ನು ಮೆರೆಯುತ್ತಾನೆ. ಅವಳು ತನ್ನ ಗುರುವೆಂದು ಹೇಳುತ್ತಾ "ನಿಜಕುಲಾಚಾರಮುಂ ಬಗೆದು ಶೀಲಪರಿಪಾಲನಂ ಮಾಳ್ಪುದಂತಲ್ಲದೆಯುಂ ನೀನೆನಗೆ ವಿದ್ಯೋಪದೇಶ ಗೈದುದರಿಂದಂ ಗುರುವಾದೆ'' ಎಂದು ವಿವೇಕ ಹೇಳುತ್ತಾನೆ. ಅನೇಕ ರಾಜರನ್ನು ಬಾಯ್ಕೇಳಿಸಿ ಕದನ ಕರ್ಕಶ ರಾವಣ ವರಣನನ್ನು ಸೆರೆಹಿಡಿದು ನಂತರ "ಕಲಿಸಾಮ ಪಿಡಿವಡೆಯ ಕಲಹದೊಳ್ ಇದು ಭಂಗಮಲ್ತು ನೀಂ ಮುನ್ನಿನವೊಲ್ ನೆಲಸಿರ್ಪುದು ನಿಜರಾಜ್ಯದೊಳ್'' ಎಂದು ಮನ್ನಿಸಿ ಕಳಿಸುತ್ತಾನೆ. ಇಂಥ ಸನ್ನಿವೇಶಗಳು ಅವನ ಮನೋಧರ್ಮಕ್ಕೆ ಹಿಡಿದ ಕನ್ನಡಿ. "ಕಲಿಯಾದವನು ಯುದ್ಧದಲ್ಲಿ ಸಾಯುತ್ತಾನೆ, ಸೆರೆಸಿಕ್ಕುತ್ತಾನೆ, 'ಆದರೆ ಅದು ಸೋಲಲ್ಲ'

**ಶ್ರೀ ದೇವನೂರು ಪಾಂಡುರಂಗ**

ಎಂಬ ತತ್ತ್ವ ರಾವಣನ ಜೀವನಾದರ್ಶ. ಸಮರದಲ್ಲಿ ರಾವಣ ಅಜೇಯನಾದರೂ ಧರ್ಮಾತ್ಮ. ಅದರಿಂದ ಇಂಥ ರಾವಣನಿಗೆ ರಾವಣನೇ ಹೋಲಿಕೆ. ಈತನ ಪರಾಕ್ರಮ ಅಸಹಾಯ ಶೂರತೆಯಿಂದಾಗಿ ಚಂದ್ರಹಾಸವೆಂಬ ಖಡ್ಗ ಇವನಲ್ಲಿರುತ್ತದೆ. ಜೊತೆಗೆ ಈತನ ಪುಣ್ಯ ಪ್ರಭಾವದಿಂದ 'ಚಕ್ರರತ್ನ'ವೂ ದೊರೆಯುತ್ತದೆ. ಅದರಿಂದ ಜಾಂಬವಂತ ಈತನ ಸಾಮರ್ಥ್ಯ ತಿಳಿಸುತ್ತಾ "ಬಲದ ಭುಜಬಲದ ವಿದ್ಯಾಬಲದ ಮನೋಬಲದ ಬಲ್ಪಿನಿಂ ಸ್ಪೈಪರ್ ಆರ್ಗಂಗೆಲಲರಿಯಂ ದಶಕಂಧರಂ, ಅಲಘ್ಯ ವಿಕ್ರಾಂತ ತುಂಗಂ ಅಮರೇಂದ್ರಗಂ'' ಎಂದು ಪ್ರಶಂಶಿಸಿದ್ದಾನೆ. ಇಂಥ ಸಾಹಸಿಯಾದರೂ ಜಿನಪೂಜೆ ಇಲ್ಲದೆ ಯಾವ ಕಾರ್ಯವನ್ನೂ ಮಾಡಲಾರ. ಜೈನ ಮುನಿಗಳ ಮಾತನ್ನು ಮೀರಲಾರ. ಧರ್ಮಾಚರಣೆಯನ್ನು ಬಿಡಲಾರ. ಸಾತ್ತ್ವಿಕತೆಯೇ ಇವನ ಬದುಕಿನ ಜೀವಾಳ.

ಇಂಥ ಉದಾತ್ತ ಮಹಾಸತ್ತ್ವನ ಬದುಕಿನಲ್ಲಿ ವಿಧಿ ಪ್ರವೇಶಿಸಿ ಇವನ ಅಧಃಪತನಕ್ಕೆ ಸಂಚಿನ ಬಲೆನೇಯುತ್ತದೆ. ದೈವಘಟನೆಯಿಂದಾಗದುದೇನು ಎಂಬಂತೆ ರಾವಣ ಸಾವಿನ ರಹಸ್ಯ ರಾಮ–ಲಕ್ಷ್ಮಣರ ಜನನಕ್ಕೆ ಮುನ್ನವೇ ಪ್ರಕಟವಾಗಿರುತ್ತದೆ. ಭವಿಷ್ಯವಾಣಿಯನ್ನು ನೈಮಿತ್ತಿಕರು ವಿಭೀಷಣನಿಗೆ ಹೇಳುತ್ತಾ–

ಏನುಂ ತೊದಳಿಲ್ಲಿದುವೆ ಶಿ
ಲಾನಿಕ್ಷಿಪ್ತಾಕ್ಷರಂ ವಿಭೀಷಣ ರಣದೊಳ್
ಜಾನಕಿಯ ದೂಸರಿಂ ಲಂ
ಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ

ಎಂಬ ಸಾವಿನ ಭೀಕರ ವಾಣಿಯ ಮೂಲಕ ಭವಿಷ್ಯದ ಬದುಕಿನ ಸುಂದರ ಹಾಸಿನ ಮೇಲೆ ವಿಧಿ ಪಗಡೆಯಾಡಲು ಪ್ರಾರಂಭಿಸುತ್ತದೆ. ವಿಭೀಷಣನು ಜಾನಕಿ–ರಾಮ–ಲಕ್ಷ್ಮಣರ ಹುಟ್ಟಿಗೆ ಕಾರಣರಾಗುವ ದಶರಥ–ಜನಕರನ್ನೆ ಕೊಲ್ಲುವ ನಿರ್ಧಾರ ಮಾಡಿ 'ಕಾರಣ ವಿಘಟನೆಯೆ ಕಾರ್ಯ ವಿಘಟನೆ ಮಲ್ತೆ' ಎಂದುಕೊಂಡರೂ, ನಾರದರಿಂದ ಈ ಸಮಾಚಾರ ತಿಳಿದುದಶರಥ-ಜನಕರು ತಮ್ಮಂತದೇ ಲೆಪ್ಪದ ಬೊಂಬೆಯನ್ನಿಟ್ಟು 'ಕಾಲವಂಚನೆಯೆ ಕಾರ್ಯಂ' ಎಂದು ತಲೆತಪ್ಪಿಸಿಕೊಳ್ಳುತ್ತಾರೆ. ಇದು ವಿಧಿ ರಾವಣನ ಸಾವಿಗಾಗಿ ನಿರ್ಮಿಸಿದ ಮೊದಲ ಹೂಟ.

ಶಂಬುಕನ ಕೊಲೆಯ ಪ್ರತೀಕಾರಕ್ಕಾಗಿ ರಾವಣ ದಂಡಕಾರಣ್ಯಕ್ಕೆ ಬರುತ್ತಾನೆ. ಸೀತೆಯ ಹೆಸರೇ ತಿಳಿಯದ ರಾವಣ. ಅಪಹರಣದ ಭಾವನೆಯೂ ಇಲ್ಲದ ರಾವಣನಿಗೆ ವಿಧಿಯು ಉಂಟು ಮಾಡಿದ ಆಕರ್ಷಣೆಯಿಂದಾಗಿ ಸೋಲು ಪ್ರಾರಂಭವಾಗುತ್ತದೆ. ರಾಮನ ಬಳಿಯಿದ್ದ ಸೀತೆ ಹೃದ್ಗೋಚರವಾದಳು "ಶೃಂಗಾರ ಸಮುದ್ರಮಂ ಕಡೆಯೆ ಹೃದ್ಭವನುದ್ಭವಯಾದಳೆಂದು ಕಣ್ಣಾರೆ ದಶಾಸ್ಯ ನೀಕ್ಷಿಸಿದನೀಕ್ಷಿಸಿ ಕಣ್ಣಾರಿದಾರೆ ಮನ್ಮಥಂ." ಚಿತ್ತ ಚಂಚಲವಾಗಿ ತನ್ನ ಶೀಲ, ವಿಮಾನದಿಂದ ಕೆಳಗುರುಳಿದಂತಾಯಿತು. ಈ ಸನ್ನಿವೇಶವನ್ನು ಅವನ ಚಂಚಲತೆಯನ್ನೂ ಕವಿ

ಬಲೆದೃಷ್ಟಿಗೆ ವಜ್ರದ ಸಂ
ಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ
ಕಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತವಾದುದು ಚಿತ್ತಂ

ಅನೇಕ ವಿದ್ಯಾಧರ ಸ್ತ್ರೀಯರು ದೇವಸ್ತ್ರೀಯರೂ ಮಾನವಸ್ತ್ರೀಯರು ತಾವೇಪ್ರೀತಿಯಿಂದ ಮೇಲೆ ಬಿದ್ದು ಬಂದರೂ ಬಗೆಯದ ರಾವಣ ಸೀತೆಯನ್ನು ಕಂಡು ಮನ್ಮಥನ ತಾಪಕ್ಕೆ ಈಡಾಗುತ್ತಾನೆ. ವಿಧಿಯ ಸೆಳೆತಕ್ಕೆ ಪಕ್ಕಾಗುತ್ತಾನೆ. ಇಂತಹ ಸಂದರ್ಭದಲ್ಲಿ ಕವಿ ರಾವಣನ ಬಗ್ಗೆ ಸಹಾನುಭೂತಿ ತೋರುತ್ತಾ "ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ" ಎನ್ನುತ್ತಾನೆ. ರಾವಣನ ಅಂತಃ ಸತ್ತ್ವ ಗುಣ ಹಾನಿಯೇ ಅವನ ವಿನಾಶಕ್ಕೆ ಮಾರ್ಗ ನಿರ್ಮಿಸುತ್ತದೆ. ವಿಷಯ ಲೋಭದಿಂದ ರಾವಣ ಭ್ರಷ್ಟನಾಗುತ್ತಾನೆ.

ಸೀತೆಯನ್ನು ಸೇರಲೋಸುಗ ಸಲಹೆಗಾಗಿ ಆಮಂತ್ರಿಸಿದ 'ಅವಲೋಕಿನಿ ವಿದ್ಯೆ'ಯು ಅವನ ದುರಂತ ಭವಿಷ್ಯ ತಿಳಿದು ಮರುಗಿ, ರಾಮಲಕ್ಷ್ಮಣರು ಕಾರಣಿಕ ಪುರುಷರೆಂದೂ, ಸೀತೆಯ ಆಸೆಯನ್ನು ಬಿಡಬೇಕೆಂದೂ ತಿಳಿಹೇಳುತ್ತದೆ. ಆತ್ಮೀಯಳೆಯಂತೆ ವಿವೇಕ ಹೇಳುತ್ತಾ ಸಕಲ ಭೂಮಂಡಲದಲ್ಲಿಯೂ ಅಧರ್ಮನಿರತರನ್ನು ನಿಯಂತ್ರಿಸಿ ಸಂರಕ್ಷಿಸುವ ಕಾರ್ಯವು ನಿನ್ನದು, ನೀನೇ ಇಂಥ ದುರ್ವಿಷಯಕ್ಕೆ ಮನಸ್ಸು ಮಾಡಿದ್ದು "ಕಾವರೆ ಕಣೆಗೊಂಡರೆಂಬ ನುಡಿಗೆಡೆಯಕ್ಕುಂ" ಎಂದು ಜವಾಬ್ದಾರಿಯನ್ನು ಹೇಳಿ ಜೊತೆಗೆ

ಅನ್ನೆಯದಿಂ ನಡೆವವರಂ
ನೀಂ ನಿಯಮಿಸುವೈ ದಶಾಸ್ಯ ಪೆರನಾವಂ ನಿ
ನ್ನಂ ನಿಯಮಿಸುವಂ ಮುನ್ನೀ
ರ್ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ

ಎಂದು ನಿನ್ನದು ಸಮುದ್ರದಂತೆ ಗಾಂಭೀರ್ಯದ ನಡೆ. ನೀನು ಮೇರೆ ಮೀರಿದರೆ ಹೇಗೆಂದು ವಿನಂತಿಸುತ್ತದೆ.

ವಿನಾಶಕಾಲೇ ವಿಪರೀತ ಬುದ್ಧಿಃ – ಎಂಬಂತೆ ಕಾಮಾತುರನಾದ ರಾವಣ ತನ್ನ ವಶದ ವಿದ್ಯೆಗೆ ಅವಳನ್ನು ಹೊಂದುವ ಕಾರಣವನ್ನು ಜಂಕಿಸಿ ತಿಳಿದು ವಿಧಿಯದಾರಿಯಂತೆ ಸೀತೆಯನ್ನು ಕೊಂಡೊಯ್ಯುತ್ತಾನೆ. ದಾರಿಯಲ್ಲಿ ರತ್ನಜಟಿಯನ್ನು ಹಿಂಸಿಸುತ್ತಾನೆ; ಜಟಾಯುವನ್ನು ಕೊಲ್ಲುತ್ತಾನೆ. ಪಾಪದಿಂದ ಪಾಪಕ್ಕೆ ಹೆಜ್ಜೆ ಇಡುತ್ತಾ ತನ್ನ ಜೀವನವನ್ನು ಕಟ್ಟಿ ಕೆಡೆಯುವ ಬಲೆಯನ್ನು ನೇಯ್ದು ಕೊಳ್ಳುತ್ತಾನೆ.

ಪ್ರಮದ ವನದಲ್ಲಿ ಸೀತೆಯನ್ನಿಟ್ಟು ನಾನಾ ಪ್ರಲೋಭನೆ ಒಡ್ಡುತ್ತಾನೆ, ವಿಫಲನಾಗುತ್ತಾನೆ. ವಿಭೀಷಣನ ವಿವೇಕವನ್ನು ತಿರಸ್ಕರಿಸುತ್ತಾನೆ. ಹನುಮಂತನ ಸಾಹಸವೂ, ಲಂಕೆ ಸುಟ್ಟದ್ದೂ ವಿವೇಕವನ್ನುಂಟು ಮಾಡುವುದಿಲ್ಲ. ಸೀತೆಯ ಹಂಬಲದ ಮೂಲಕ ಸಾವಿನ ಹಾದಿಯನ್ನೆ ಸುಗಮಗೊಳಿಸುತ್ತಾನೆ. ರಾಮನ ಸೈನ್ಯ 'ಆಕಾಶಗಾಮಿನಿ' ವಿದ್ಯೆಯಿಂದ ಸಮುದ್ರದಾಟಿ ಬಂದು ಅಭೇದ್ಯವಾದ ಕೋಟೆಯನ್ನು ಮುತ್ತಿ ಕುಂಭಕರ್ಣ ಮತ್ತು ಮಕ್ಕಳನ್ನು ಸೆರೆ ಹಿಡಿದಾಗ ಮರುಗಿದರೂ ಅಹಂಭಾವ ಅವನನ್ನು ಯುದ್ಧಕ್ಕೆ ಪ್ರೇರೇಪಿಸುತ್ತದೆ. ರಾಮನನ್ನು ಗೆಲ್ಲುವ ವಿಜಯ ಸಾಧನೆಗಾಗಿ ರಾವಣನು ಬಹುರೂಪಿಣೀ ವಿದ್ಯೆಯನ್ನು ಜಿನಾಲಯದಲ್ಲಿ ಭಕ್ತಿಯಿಂದ ಸಾಧಿಸುತ್ತಾನೆ. ಅವನ ಅನನ್ಯ ಭಕ್ತಿಗೆ, ಪಾವಿತ್ರ್ಯಕ್ಕೆ ವಿದ್ಯೆಪ್ರತ್ಯಕ್ಷವಾಗಿ ರಾಮಲಕ್ಷ್ಮಣರನ್ನು ಕೊಲ್ಲಲಾರೆನೆಂದೂ ಉಳಿದವರನ್ನು ಬಿಡಲಾರನೆಂದೂ ಹೇಳುತ್ತದೆ. ಆದರೂ ಸೀತೆಯನ್ನು ಯುದ್ಧಕ್ಕೆ ಮುನ್ನ ಒಲಿಸಿ ಕೊಳ್ಳಲೋಸುಗ ಹೋಗಿ ಬಹುರೂಪಿಣೀ ವಿದ್ಯೆಯಿಂದ ರಾಮಲಕ್ಷ್ಮಣರನ್ನು ಕೊಲ್ಲುವುದಾಗಿ ಹೇಳಿದಾಗ ಸೀತೆ ಮೂರ್ಛೆ ಹೋಗುತ್ತಾಳೆ. ಆಗ ಅವನಲ್ಲಿ ಸದಸದ್ವಿವೇಕ ಮೂಡಿ ಅವಳ ಪತಿಭಕ್ತಿ, ಚಾರಿತ್ರಶೀಲತೆಯನ್ನು ಮೆಚ್ಚಿ ತನ್ನ ಕಾರ್ಯಕ್ಕೆ ಪಶ್ಚಾತ್ತಾಪಪಡುತ್ತಾನೆ. ಅವನ ಮನೋಪರಿವರ್ತನೆಯನ್ನು ಕವಿ ಬಣ್ಣಿಸುತ್ತಾ;

ಕದಡಿದ ಸಲಿಲಂ ತಿಳಿವಂ
ದದೆ ತನ್ನಿಂ ತಾನೆ ತಿಳಿದ ದಶವದನಂಗಾ
ದುದುವೈರಾಗ್ಯಂ ಸೀತೆಯೊಳು
ದಾತ್ತನೊಳ್ ಪುಟ್ಟದಲ್ತೆ ನೀಲಿರಾಗಂ

ಎಂದು ರಾವಣನ ಉದಾತ್ತತೆಯನ್ನ ಎತ್ತಿ ತೋರುತ್ತಾನೆ. ರಾವಣ ಯುದ್ಧಮಾಡಿ ಅವರನ್ನು ಗೆದ್ದು ಸೀತೆಯನ್ನು ರಾಮನಿಗೆ ಒಪ್ಪಿಸಲು ನಿಶ್ಚಯಿಸುತ್ತಾನೆ.

ಯುದ್ಧದಲ್ಲಿ ಲಕ್ಷ್ಮಣ ಮೂರ್ಛೆ ಹೋದರೂ ಇರಿಯದೆ ಧರ್ಮ ಮಾರ್ಗದಂತೆ ಯುದ್ಧಮಾಡಿ ಕೊನೆಗೂ ಲಕ್ಷ್ಮಣನಿಂದಲೇ ಹತನಾಗುತ್ತಾನೆ. ತಾನುನೆಚ್ಚಿದ ಶಕ್ತಿಯೆಲ್ಲಾ ಇವನಿಗೆ ಮಾರಕವಾಗುತ್ತದ. ಇಂಥವ್ಯಕ್ತಿಯ ಸಾವು ವಿನಾಶವಲ್ಲ "ಅವನು ಸತ್ತರೂ ಬದುಕಿದಂತೆಯೆ" ಎಂಬ ಮಾತು ಸತ್ಯ. ಪೌರುಷ ಪ್ರದರ್ಶನವೇ ಜಯವೆಂಬ ಅವನ ನಂಬಿಕೆ. ಇದರಿಂದಲೇ ಅವನು ವಿಧಿಯನ್ನು ಪ್ರತಿಭಟಿಸುತ್ತಾನೆ ಹಾಗೂ ವೀರಮರಣವನ್ನು ಹೊಂದುತ್ತಾನೆ ಎಂಬ ಮಾತು ಈ ಪಾತ್ರದ ವಿಶ್ಲೇಷಣೆಯಂತಿದೆ.



# ತ್ಯಾಗರಾಜರು ಚಿತ್ರಿಸಿದ ಶ್ರೀರಾಮ

ಡಾ|| ವಿ.ಎಸ್.
ಸಂಪತ್ಕುಮಾರಾಚಾರ್ಯ



ಶ್ರೀಮದ್ರಾಮಾಯಣವು ಭಾರತದ ಆದಿ ಕಾವ್ಯ. ಭಾರತೀಯ ಸಾಹಿತ್ಯದಲ್ಲಿ ಇದು ಅತ್ಯಂತ ಹಿರಿಯ ಸ್ಥಾನವನ್ನು ಪಡೆದಿರುವುದಲ್ಲದೆ, ಭಾರತೀಯ ಸಂಸ್ಕೃತಿಯ ದ್ಯೋತಕವಾಗಿ ಬೆಳಗುತ್ತಿದೆ. 24000 ಶ್ಲೋಕಗಳಿಂದ ಕೂಡಿರುವ ಈ ಕಾವ್ಯವು ಸಂಸ್ಕೃತ ಸಾಹಿತ್ಯದಲ್ಲೇ ಅತ್ಯಂತ ಸರಳವಾದ, ಸುಮನೋಹರವಾದ ಶೈಲಿಯಲ್ಲಿ ಹೃದಯಂಗಮವಾಗಿ ವಿರಚಿಸಲ್ಪಟ್ಟಿದೆ. ಜನಸಾಮಾನ್ಯರಿಗೂ ಅರ್ಥವಾಗುವ ಶೈಲಿಯಲ್ಲಿ ಸರ್ವಶ್ರುತಿ ಮನೋಹರವಾದ ಮಹೋನ್ನತವಾದ ಈ ಕಾವ್ಯವನ್ನು ರಚಿಸಿ ಮಹರ್ಷಿ ವಾಲ್ಮೀಕಿ ಅಜರಾಮರರಾಗಿದ್ದಾರೆ. ಜನರು ಸಹಸ್ರಾರು ವರ್ಷಗಳಿಂದ ಶ್ರೀಮದ್ರಾಮಾಯಣವನ್ನು ಕೇಳುತ್ತ, ಹಾಡುತ್ತ, ಹೇಳುತ್ತ, ಅಭಿನಯಿಸುತ್ತ ಬಂದಿದ್ದಾರೆ. ಆದರೆ ಹೇಳಿದಷ್ಟೂ, ಮತ್ತೆ ಮತ್ತೆ ಹೇಳಬೇಕು, ಕೇಳಬೇಕು ಎನಿಸುವಂತಿದೆ ಈ ಕಾವ್ಯ. ಇದು ನಿತ್ಯ ನೂತನವಾದ ಮಹಾಕಾವ್ಯವಾಗಿದೆ. ಅನೇಕ ಭಾರತೀಯ ಮತ್ತು ವಿದೇಶೀ ಭಾಷೆಗಳಿಗೆ ಅನುವದಿತವಾಗಿದೆ. ಇದರಲ್ಲಿ ಬರುವ ಘಟನೆಗಳು ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ಭಾರತದ ಹಲವು ಭಾಗಗಳಲ್ಲಿ ಸಂಭವಿಸಿದುವು.

ಮರ್ಯಾದಾ ಪುರುಷೋತ್ತಮನೆನಿಸಿದ ಶ್ರೀ ರಾಮಚಂದ್ರನ ದಿವ್ಯಚರಿತೆಯನ್ನು ಬಣ್ಣಿಸಲು, ವಾಲ್ಮೀಕಿಮುನಿ ಶ್ರೀಮದ್ರಾಮಾಯಣವನ್ನು ರಚಿಸಿ ವಿಶ್ವವಿಖ್ಯಾತರಾಗಿದ್ದಾರೆ. ಇದಕ್ಕೆ ಕಾರಣ ಇದು ಉತ್ತಮಕಾವ್ಯವಾಗಿರುವುದರ ಜೊತೆಗೆ ಮೋಕ್ಷ ಶಾಸ್ತ್ರವೂ ಆಗಿ ಬೆಳಗುತ್ತಿರುವುದು. ರಾಮಾಯಣವು ಕೇವಲ ರಾಮಚಂದ್ರನ ಕಥೆ ಅಲ್ಲ. ಮಹಾಸಾಧ್ವೀಶಿರೋಮಣಿಯಾದ ಸೀತೆಯ ಭವ್ಯಚಾರಿತ್ರ್ಯವೂ ಆಗಿದೆ. 'ರಾಮಾಯಣಮಿದಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್" ಎಂದು ವಾಲ್ಮೀಕಿ ಮಹರ್ಷಿಯೇ ನುಡಿದಿದ್ದಾರೆ. ಈ ಕಾವ್ಯದಲ್ಲಿ ಶ್ರೀರಾಮನ ಶ್ರೇಷ್ಠ ಹಾಗೂ ಕಲ್ಯಾಣ ಗುಣಗಳನ್ನು ವಾಲ್ಮೀಕಿ ಸುಂದರವಾಗಿ ನಿರೂಪಿಸಿದ್ದಾರೆ.

ಭಾರತದ ಅತ್ಯಂತ ಶ್ರೇಷ್ಠ ವಾಗ್ಗೇಯಕಾರರೂ ಭಕ್ತಶಿರೋಮಣಿಯೂ ಆದರೆ ಶ್ರೀ ತ್ಯಾಗರಾಜರು ಸಾವಿರಾರು ಕೃತಿಗಳನ್ನು ರಚಿಸಿ ರಾಮಾಯಣವನ್ನು ಹಾಡಿ ರಾಮಾಯಣವಾಗ್ಗೇಯಕಾರರೆನಿಸಿಕೊಂಡಿದ್ದಾರೆ. ಅವರು ಚಿತ್ರಿಸಿರುವ ಶ್ರೀರಾಮನ ಮಾನವೀಯ ಮತ್ತು ದೈವಿಕವಾದ ಗುಣಗಳು ವರ್ಣನಾತೀತ. ವಾಲ್ಮೀಕಿ ರಾಮಾಯಣವಲ್ಲದೆ ತುಳಸೀದಾಸರ ರಾಮಾಯಣವಾದ ರಾಮಚರಿತ ಮಾನಸ, ಕಂಬರಾಮಾಯಣ, ಆನಂದ ರಾಮಾಯಣ ಇತ್ಯಾದಿ ಹಲವಾರು ರಾಮಾಯಣಗಳನ್ನು ಅಧ್ಯಯನ ಮಾಡಿದ್ದ ಅವರು ಹಲವಾರು ಘಟನೆಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ ಮತ್ತು ಹಾಡಿದ್ದಾರೆ.

ತ್ಯಾಗರಾಜರ ಜೀವನ ಮತ್ತು ಸಿದ್ಧಿಯು ರಾಮನಾಮವು ಮೋಕ್ಷಕ್ಕೆ ಸಾಧನವೆಂಬುದಕ್ಕೆ ನಿದರ್ಶನ. ರಾಮನಾಮ ಸಿದ್ಧಾಂತದ ಪ್ರತಿಪಾದಕರಾಗಿ (ರಾಮನಾಮಮು ಸಾರಮೇಗಾನಿ ಅನ್ಯಮಾರ್ಗ ವಿಚಾರಮೇಟಿಕೆ ಓ ಮನಸಾ – ಪಂತುವರಾಳಿ), ರಾಮನಾಮವನ್ನು 96 ಕೋಟಿ ಸಲ ಜಪಿಸಿ ಅವರು ಸಿದ್ಧಿಯನ್ನು ಪಡೆದರು ಎಂಬುದನ್ನು ಇಲ್ಲಿ ಸ್ಮರಿಸಬಹುದು. ತನ್ನ ನಾಲಿಗೆಯು ಯಾವಾಗಲೂ ರಾಮನಾಮವನ್ನು ಜಪಿಸುತ್ತಿರುವಂತೆ ಅನುಗ್ರಹಿಸಬೇಕೆಂದು ಅವರು ಪ್ರಾರ್ಥಿಸಿರುವುದು ಗಮನಾರ್ಹ. (ಮಾ ರಸಮುನ ನೀ ನಾಮಮು ಮಾರು ಮಾರು ಬಲ್ಕನು ದಯ ಜೇಯುಮು– ಶ್ರೀ ರಘುವರ – ದೇವಗಾಂಧಾರಿ) ಮಂತ್ರರಾಜನಾದ ರಾಮನಾಮವು ಸದಾ ಅವರ ನಾಲಿಗೆಯಲ್ಲಿ ರಾಜಿಸುತ್ತಿತ್ತು. (ಊರಕೆ–ಶಹಾನ) ಅವರು ರಾಮನಾಮದೊಂದಿಗೇ ಜನ್ಮತಾಳಿ ಅದರ ಜಪವನ್ನು ನಿರಂತರ ಮುಂದುವರಿಸಿದರು. (ಪಾಹಿಮಾಂ ಹರೇ – ದಿವ್ಯನಾಮ). ಅವರು ಪ್ರಹ್ಲಾದನಂತೆ ಗರ್ಭ ಭಾಗವತರು.

## ಇಷ್ಟದೇವತೆ :

ಶ್ರೀರಾಮನು ಅಯೋಧ್ಯೆಯನ್ನೂ, ಅಯೋಧ್ಯೆಯ ಜನರ ಹೃದಯವನ್ನೂ ರಾಜಾರಾಮಚಂದ್ರನಾಗಿ ಆಳಿದನು. ಅವನು ಆಳುತ್ತಿದ್ದಾಗ ಪ್ರಪಂಚವೇ ಅವನಲ್ಲಿ ಒಂದಾಗಿ ಎಲ್ಲರೂ ರಾಮ, ರಾಮ ಎನ್ನುತ್ತಿದ್ದರು. (ರಾಮೋರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ। ರಾಮಭೂತಂ ಜಗದಭೂದ್ರಾಮೇ ರಾಜ್ಯಂ ಪ್ರಶಾಸತಿ ॥ – ರಾಮಾಯಣ–6–131–102) ಇದನ್ನು ತ್ಯಾಗರಾಜರು 'ಕಾರುಬಾರು' (ಮುಖಾರಿ–ಆದಿ) ಎಂಬ ಕೃತಿಯಲ್ಲಿ ವಿವರಿಸಿದ್ದಾರೆ– "ರಾಮ! ಪ್ರಜೆಗಳು ಮತ್ತು ಋಷಿಗಳು ಸುಖವಾಗಿರುವಂತೆ ನಿನ್ನಂತೆ ಅಯೋಧ್ಯೆಯನ್ನು ರಕ್ಷಿಸಿ ಆಳಿದವರು ಯಾರಿದ್ದಾರೆ? ನಿನ್ನ ಪ್ರಜೆಗಳು ವಿದ್ವಾಂಸರೂ, ಸಕಲ ಕಲೆಗಳನ್ನು ತಿಳಿದವರೂ, ಶೀಲವಂತರೂ, ಗರ್ವರಹಿತರೂ, ದೀರ್ಘಾಯುಗಳೂ ಆಗಿದ್ದರು. ವರ್ಷದಲ್ಲಿ ಮೂರುಸಲ ಮಳೆ ಬೀಳುತ್ತಿತ್ತು". ಅನರ್ಘ ರಾಘವವೆಂಬ ನಾಟಕದ ಒಂದು ಶ್ಲೋಕವನ್ನು ಸ್ವಲ್ಪ ಬದಲಾಯಿಸಿ ತ್ಯಾಗರಾಜರು – "ವಾಲ್ಮೀಕಿ ಮುಂತಾದ ಋಷಿಗಳೂ, ಇತರ ಕವಿಗಳೂ ನಿನ್ನನ್ನು ವರ್ಣಿಸಿದ್ದರೇನು ? ನಿನ್ನ ಸದ್ಭಕ್ತರು ನಿನ್ನನ್ನು ವರ್ಣಿಸಿ ಸ್ತುತಿಸಿದ್ದರೇನು ? ಅವರು ಸ್ತುತಿಸಿದ್ದಾರೆಂದು ನನ್ನ ಬಯಕೆ ನಿಲ್ಲಬೇಕೇ? ನಿನ್ನ ಮಹಿಮೆಯನ್ನು ಕುರಿತು ಹಾಡುವುದೇ ನನ್ನ ಜೀವನದ ಸೇವಾವೃತ್ತಿಯೆಂದು ನಾನು ತಿಳಿದಿರುವೆ" ಎಂದಿದ್ದಾರೆ (ಏಪನಿಕೋ ಜನ್ಮಿಂಚಿತಿನನಿ – ಆದಿ – ಅಸಾವೇರಿ) ಇದೇ ಭಾವನೆಯನ್ನು ಸ್ವಲ್ಪ ಬದಲಾಯಿಸಿ "ನೀನು ರಾಮಾವತಾರವೆತ್ತಲು ಕಾರಣವೇನು? ಶತರಾಗ

(23 ನೇ ಪುಟ ನೋಡಿ)



# ಕುವೆಂಪು ಅವರ ಸೀತಾಸಂದರ್ಶನ

ರಾಮಾಯಣದ ನಾಯಕ ಶ್ರೀರಾಮ, ನಾಯಕಿ ಜಾನಕಿ, ಪ್ರತಿನಾಯಕ ರಾವಣ, ಇವರಿಗೆ ಪ್ರತ್ಯೇಕ ಸ್ಥಾನಗಳಿದ್ದರೂ, ಈ ಪಾತ್ರಗಳು ಪಡೆದಿರುವಷ್ಟೇ ಪ್ರಾಮುಖ್ಯತೆ ಪಡೆದು ರಾಮಾಯಣದ ಹೃದಯವೆಂದೆನಿಸಿದ ಪಾತ್ರ– "ಆಂಜನೇಯ". ಇದೇ ರಾಮಾಯಣದ ಪಂಚೆಗೆ ಅಂಚಿದ್ದಂತೆ ಪವನಸುತ.

"ರಾಮಾಯಣ"ಗಳಲ್ಲಿ ಹಲವು ಸಂದೇಹಗಳು ಬರಬಹುದಾದರೂ, ರಸರ್ಷಿ ಕುವೆಂಪುರವರ "ಶ್ರೀರಾಮಾಯಣ ದರ್ಶನಂ" ಮಹಾಕಾವ್ಯದಲ್ಲಿ ಸಂದೇಹಕ್ಕೆ ಬದಲಾಗಿ ಸಹಜತೆ ಪ್ರತಿ ಪಾತ್ರದಲ್ಲೂ ಎದ್ದುಕಾಣುತ್ತದೆ. 'ಶ್ರೀರಾಮಾಯಣ ದರ್ಶನಂ' ಕಾವ್ಯದ ಅನೇಕ ಹೃದಯಂಗಮ, ಸುಂದರ ಸನ್ನಿವೇಶಗಳಲ್ಲಿ ಒಂದಾದ, ಆಂಜನೇಯನು ಸೀತೆಯನ್ನು ಸಂದರ್ಶಿಸುವ ಪ್ರಸಂಗವನ್ನು ಕುವೆಂಪು ಬಣ್ಣಿಸಿರುವ ರೀತಿಯೇ ಮನಮೋಹಕ, ಅದಕ್ಕೆ ಅದೇ ಸಾಟಿಯೆನ್ನಬಹುದು. ಅದನ್ನು ಸರಳಗೊಳಿಸಿ ನೋಡುವುದೇ ಇಲ್ಲಿನ ಪ್ರಯತ್ನ.

ಶ್ರೀರಾಮನ ಮಹಾಪರಾಕ್ರಮ ಅಸಂಖ್ಯಾತ ವಾನರ ವೀರರಸೇನೆ, ಎಲ್ಲವೂ ಆಂಜನೇಯನ "ಸೀತಾನ್ವೇಷಣೆಯನ್ನೇ" ನೆಚ್ಚಿದೆ. ಆಂಜನೇಯ



ಮಹಾಸಾಗರವನ್ನು ಲಂಘಿಸಿ, ಲಂಕಾದೇವಿಯನ್ನು ಭಂಗಿಸಿ, ಲಂಕೆಯನ್ನೆಲ್ಲ ಪುಡುಕಿ, ಮಹಾಸತಿಯನ್ನು ಕಾಣದೆ ಅಶೋಕವನದ ಶಿಂಶುಪ ವೃಕ್ಷದ ಮೇಲೆ ಕುಳಿತು

> ಹತಳಿರಲಿ, ಮೃತಳಿರಲಿ, ಮತ್ತೆ
> ಬರ್ದುಕುವ ತಪದ ತೀವ್ರತೆಗೆ ತವಿದು ಸುಕ್ಕಿರಲಿ
> ಎಲ್ಲಿರಲಿ, ಎಂತಿರಲಿ, ಕಂಡೆನಲ್ಲದೆ ನನ್ನ ಆ
> ಸುವ್ರತಾಭಗಿನಿಯಂ ಬಿಡೆನೀ ದಶಗ್ರೀವ
> ಸೀಮೆಯಂ

ಎಂದು ದೃಢ ನಿಶ್ಚಯಕ್ಕೆ ಬಂದು ಕಾಯುತ್ತಿರಲು ರಾಮನ ಶೋಕದ ಕಳೆ ಕಳೆದು, ಜಾನಕಿಯ ಭಾಗ್ಯದ ದಿನ ಉದಯಿಸಿತೆಂಬಂತೆ ಪೂರ್ವಾಂಚಲದಲ್ಲಿ ರವಿ ಮೂಡುತ್ತಿರಲು, ಗುಡಿಸಿಲಿನ ತಡಿಕೆಯನ್ನು ಪಕ್ಕಕ್ಕೆ ಸರಿಸಿ ಈಚೆ ಬಂದ ಮೈಥಿಲಿಯ ಮನಸ್ಸಿಗೂ ಒಂದು ಬಗೆಯ ಸಂತಸ ಮೂಡುತ್ತಿರಲು, ಮುಂದೆ ಬರಬಹುದಾದ ಭಾಗ್ಯಕ್ಕೆ ಶುಭ ಶಕುನದಂತೆ ಕನ್ನಡವಕ್ಕಿ ಕಾಜಾಣಗಳು ಹಾಡಿದವು ಮಧುರ ಕಂಠದಿಂದ. ಇದ್ದಕ್ಕಿದ್ದಂತೆ ಹಕ್ಕಿಗಳ ಗಾನ ನಿಂತಿತು, ರಾಜವೈಭವದ ವೇಷ ಬಿಟ್ಟು; ಮಿಂದು ಮಡಿಯುಟ್ಟು ದೇವಾಲಕ್ಕೆ ಹೋಗುವಂತೆ, ತನ್ನ ತಂಗಿ ಚಂದ್ರನಖಿಯ ಜೊತೆಯಲ್ಲಿ ಜಾನಕಿ ಇರುವೆಡೆಗೆ ಬಂದನು ದಶಗ್ರೀವ. ಚಂಡಮಾರುತಕ್ಕೆ ಸಿಕ್ಕಿ ತತ್ತರಿಸುವ ಕದಳಿಯಂತೆ ಕಂಪಿಸಿದ ಸೀತೆ ನಾರುಡಿಯ ಸೆರಗನ್ನು ಮೈಗೆ ಇನ್ನೂ ಬಿಗಿಯಾಗಿ ಮುಚ್ಚಿಕೊಂಡು ದುಃಖಕ್ಕೆ, ಭಯಕ್ಕೆ ತತ್ತರಿಸಿ ಕುಸಿದಳು.

ಇದನ್ನು ಕಂಡ ರಾಕ್ಷಸೇಂದ್ರ ರಾವಣ ಕಸಿವಿಸಿಗೊಂಡು ಅಸಹನೆಯಿಂದ ಕೂಡಿ ತ್ರಿಜಟೆಯ ಕಡೆ ತಿರುಗಿ ಸಿಟ್ಟಿನಿಂದ "ನಿನ್ನ ಸೇವಾ ಫಲವೋ? ಮೇಣ್ ಸ್ತ್ರೀಸಹಜ ಛಲವೋ? ದೇವಿಗೀಪಾಂಗಿದೇನ್, ತ್ರಿಜಟೆ?" ಎಂದು ತನ್ನ ಹೊಟ್ಟೆಯ ಸಿಟ್ಟಿನ ಪೊಟ್ಟಣ ಸಿಡಿದವನಂತೆ 'ಈಕೆ ಸೀತೆಯೊ ಪ್ರೇತವೊ? ನಿದ್ರಾಹಾರ, ಸ್ನಾನಾದಿಗಳನ್ನು ಕಾಣದ ಈ ಹೆಣ್ಣು ಹೆಣ್ಣೋ, ಹೆಣ್ಣಿನ ಶರೀರದ ಅಸ್ಥಿಪಂಜರವೊ...' ಎಂದು ಸಿಡಿಯಲು ಗಾಬರಿಗೊಂಡ ತ್ರಿಜಟೆ, ಮೂರು ಹೊತ್ತೂ ರಾಮಚಂದ್ರನನ್ನು ನೆನೆಯುತ್ತಿರುವುದನ್ನು ತಿಳಿಸಲು, ಅಗ್ನಿಗೆ ಆಜ್ಯ ಹೊಯ್ದಂತಾದ ಲಂಕೇಶನು ತನ್ನ ತಂಗಿ ಚಂದ್ರನಖಿಯ ಎತ್ತ ತಿರುಗಿ "ಏನಿದಾ ತಂಗಿ"ಎಂದು ಕೇಳಲು, ಸೀತೆಯ ಸಂಗಾತದಿಂದ ಹೃದಯ ಸಂಸ್ಕಾರಗೊಂಡಿದ್ದ ಚಂದ್ರನಖಿ, ತನ್ನ ಅಣ್ಣನಿಗೆ, "ಸೀತೆ ಬರೀ ಹೆಣ್ಣಲ್ಲ ಈ ಮುಂಚೆ ನೀನು ಕರೆದಂತೆ ಆಕೆ ದೇವಿಯೇ" ಎನ್ನವಳು

ಶ್ರೀ ಮು. ಕೃಷ್ಣಪ್ಪ

'ಕೋಪದಿಂದ ಅವಳಿಗುತ್ತರವಿತ್ತ ರಾವಣ ನಂತರ ಅವಳನ್ನೊಲಿಸಿಕೊಳ್ಳುವಂತೆ ಮಾತನಾಡಿ ಮೈಥಿಲಿಯತ್ತ ತಿರುಗಿ 'ನಿನ್ನ ದುರವಸ್ಥೆಯನ್ನು ಕಂಡು ಕೋಪಿಸಿಕೊಂಡೆ, ನಿನ್ನ ವ್ರತವನ್ನು ಸಾಕು ಮಾಡು. ದೇವತೆಗಳಿಗೂ ದುರ್ಭೇದ್ಯವಾದ ಈ ಮಹಾಸಾಗರ, ನಿನ್ನ ಮತ್ತು ರಾಮನ ಸಂಧಿಯೂ ಸಾಧ್ಯವಿಲ್ಲವೆಂದು ಘೋಷಿಸುತ್ತಿದೆ. ನಿನ್ನ ಹೊರತಾದ ಆತ ಕಿಷ್ಕಿಂಧೆಯಲ್ಲಿ ಇನ್ನಾವಳೊಂದಿಗೋ ಸುಖವಾಗಿದ್ದಾನೆ. ನನ್ನ ಕಿವಿಗೆ ಬೀಳದ್ದಾವುದಿದೆ. ನಿನ್ನನ್ನು ಮರೆತ ಆ ಕೃತಘ್ನನನ್ನು ವ್ಯರ್ಥವಾಗಿ ನೆನೆನೆನೆದು ಏಕೆ ನೋಯುವೆ? ಶಿವ ಧನುಸ್ಸನ್ನು ಎತ್ತಿದ ಮಾತ್ರಕ್ಕೆ ರಾಮ ನಿನ್ನ ಗಂಡನಾದರೆ, ಅದಕ್ಕಿಂತ ಮಿಗಿಲಾದ ಬಲದ ಕಾರ್ಯಗಳನ್ನು ಮಾಡಿ ತೋರಿಸುತ್ತೇನೆ' ಎಂದು ತನ್ನ ಪರಾಕ್ರಮದ ಬಗ್ಗೆ ಕೊಚ್ಚಿಕೊಳ್ಳುತ್ತಿರುವ ರಾವಣನ ಮಾತುಗಳನ್ನು ಶಿಂಶುಪಾ ವೃಕ್ಷದಗ್ರದಿಂದ ಆಲಿಸುತ್ತಿರುವ ಆಂಜನೇಯನಿಗೆ ಆ ತಕ್ಷಣವೆ ಅವನನ್ನು ಕೊಂದು ಮುಗಿಸುವಷ್ಟು ಕೋಪ ಉಕ್ಕುತ್ತದೆ.

ರಾವಣನ ಕಟು ನುಡಿಗಳಿಂದ ದುಃಖಿತೆಯಾದ ಸೀತೆ ಕಡಿದ ಮರದಂತೆ ಭೂಮಿಗುರುಳಿ ತ್ರಿಜಟೆಯ ಸಹಾಯದಿಂದ ಕುಳಿತು ಬಿಕ್ಕುತ್ತಿರಲು, "ನಿನ್ನನ್ನು ನೋಯಿಸಬೇಕೆಂದು ನಾನು ಈ ಮಾತುಗಳನ್ನಾಡಲಿಲ್ಲ. ಕಳೆದುಹೋದ ಜೀವನ ಒಂದು ಸುಳ್ಳುಕನಸೆಂದು ಮರೆತು, ಎದುರಿಗಿರುವುದನ್ನು ಒಪ್ಪಿ ಸ್ವರ್ಗ ಸುಖವನ್ನು ಅನುಭವಿಸು" ಎಂದು ರಾವಣನು ಹೇಳುತ್ತಿರಲು ಸಹಿಸಲಾಗದ ಜನಕಸುತೆ ಬರುತ್ತಿರುವ ದುಃಖವನ್ನು ಒತ್ತರಿಸಿ ರಾವಣನ ರಾಕ್ಷಸತ್ವಕ್ಕೂ ಹೆದರದೆ, ತುಳಿದ ಸರ್ಪದಂತೆ, ಮೌನವನ್ನು ಮುರಿದು ರಾವಣನೊಂದಿಗೆ ಮಾತಾಡುವುದೂ ತನಗೆ ಇಷ್ಟವಿಲ್ಲವೆಂಬಂತೆ ಪಕ್ಕದಲ್ಲಿದ್ದ ತ್ರಿಜಟೆಯನ್ನು ಕುರಿತು–

"ಹೇಳು ತ್ರಿಜಟೆ; ನಿನ್ನ ಅನ್ನದಾತನಿಗೆ, ಕ್ಷತ್ರಿಯ ತತ್ತ್ವವನ್ನು ಕತ್ತೆಗಳಿಗೇ ಉಪದೇಶಮಾಡಬೇಕೇ ಹೊರತು ರಘುಕುಲತಿಲಕನ ಸತಿಗಲ್ಲ. ವಿನಯ ಸೌಜನ್ಯಗಳ ನಾಯಿ ನಟನೆಗೆ, ಸುಳ್ಳು ಹೇಳುವ ನಾಲಿಗೆಗೆ, ಈತನ ಹೊಲಸು ಸಂಪತ್ತಿಗೆ ಧಿಕ್ಕಾರವಿರಲಿ, ಅವನ ಕಡೆ ಉಗಿಯುವುದೂ ನನಗೆ ಇಷ್ಟವಿಲ್ಲ. ಶ್ರೀರಾಮ ಎಲ್ಲಿದ್ದರೂ ಹೇಗಿದ್ದರೂ ನನ್ನ ಗಂಡನೆ. ಹೇಳು ತ್ರಿಜಟೆ, ಪಾಪಿಗೆ ಮುಕ್ತಿ ಹೇಗೆ ದುರ್ಲಭವೋ ಹಾಗೆ ನಾನು ರಾಮನಿಗಲ್ಲದೆ ಬೇರೆಯವರಿಗೆ ದುರ್ಲಭಳು. ರಾಮ ಮಹಿಮೆಯನ್ನು ಬಲ್ಲೆ ನಾನು, ಕೇಳು ಆ ಪಕ್ಷಿ ನುಡಿಯುತ್ತಿರುವ ಭವಿಷ್ಯವನ್ನು, ರಾವಣನ ಮೃತ್ಯುವಿಗೆ ಸಾಗರವೇ ಸೇತುವೆಯಾಗುತ್ತದೆ. ಹಾಗಾಗುವ ಮೊದಲೇ ನನ್ನನ್ನು ಶ್ರೀರಾಮನ ಅಡಿಗಳಲ್ಲಿ ಒಪ್ಪಿಸಿ ಶರಣಾಗಲಿ". ಸೀತೆ ತ್ರಿಜಟೆಗೆ ಹೇಳಿದ ಈ ಮಾತುಗಳಿಂದಾದ ಆಘಾತದಿಂದಾಗಿ ಕಣ್ಮುಚ್ಚಿ ಸತ್ತು ಹುಟ್ಟಿದವನಂತೆ ಮತ್ತೆ ಕಣ್ತೆರೆದು ಸೀತೆಯನ್ನು ಕುರಿತು "ನೀನು ತಿಳಿಯದೆ ಆಡಿದ ಮಾತುಗಳು, ನಿನಗೆ ನಿದ್ರಾಹಾರಗಳ ಕೊರತೆಯಿಂದಾಗಿ ಮತಿಭ್ರಮಣೆಯಾಗಿದೆಯಾದ್ದರಿಂದ ನಾನು ಕೋಪಿಸಿಕೊಳ್ಳುವುದಿಲ್ಲ" ವೆಂದು ಹೇಳಿ, ತ್ರಿಜಟೆಯನ್ನು ಕುರಿತು "ಅಲ್ಪಾಹಾರದಿಂದ ಬುದ್ಧಿ ಸ್ಥಿರತೆಯನ್ನು ಕಳೆದುಕೊಂಡಿರುವ ಈಕೆಗೆ ಬುದ್ಧಿ ಬಂದ ಮೇಲೆ ಹೇಳು– ಈಗ ಇಲ್ಲಿಗೆ ಬಂದಿದ್ದವರಾರು? ಏನು ಹೇಳಿದರೆಂಬುದನ್ನು. ಇನ್ನು ಎರಡು ತಿಂಗಳು ಅವಧಿಮಾತ್ರ ಉಳಿದಿದೆ" ಎಂದು ಹೇಳುತ್ತ, ಸೀತೆಯನ್ನು ಒಂದೇ ನೋಟದಿಂದ ನೋಡುತ್ತ, ನಿರಶನವನ್ನೇ ವ್ರತವನ್ನಾಗಿಸಿಕೊಂಡು ಆತ್ಮಹತ್ಯೆಮಾಡಿಕೊಂಡು ಸತ್ತರೆ, ಅದೇ ಚಿತೆಯನ್ನೇರಿ ಹೆಣದ ಪಕ್ಕದಲ್ಲಿಯೆ ಮಲಗಿ ಭಸ್ಮರೂಪದಿಂದಾದರೂ ನಿನ್ನನ್ನು ಹೊಂದಿ ಮುಕ್ತಿ ಪಡೆಯುತ್ತೇನೆ- ಎನ್ನುತ್ತಿದ್ದಂತೆಯೆ ಕೊರಳುಬ್ಬಿ ಬರಲು ಗದ್ಗದ ಕಂಠದಿಂದ ನುಡಿದು ಬಂದ ದಾರಿಯಲ್ಲೆ ಹಿಂದಿರುಗಿದ ಲಂಕೇಶ್ವರನ ಕಡೆಯ ಮಾತುಗಳ ಕರ್ಕಶತೆಯನ್ನು ಕೇಳಿ ಬದುಕಿಗಿಂತಲೂ ಮರಣವೇ ಲೇಸೆಂದು ಶೋಕಿಸುವ ಸೀತೆಯ ದುಃಖದಲ್ಲಿ ಭಾಗಿಯಾದ ತ್ರಿಜಟೆ, ದುಃಖಿಸುತ್ತಲೆ ಸೀತೆಯನ್ನು ಸಂತೈಸುತ್ತ,

"ರಾಮನು ನಿನ್ನನ್ನು ಮರೆಯುವುದು ಎಷ್ಟು ಹುಸಿಯೋ ಅಷ್ಟೇ ಸುಳ್ಳು ನಿನ್ನನ್ನು ರಾವಣ ಬಲಾತ್ಕಾರಿಸುವುದು, ಚಿತೆಗೇರುವುದು" ಎಂದು ಸಂತೈಸುತ್ತಾಳೆ.

'ಅವನು ಹೇಳಿದ್ದೆಲ್ಲ ಸುಳ್ಳೇನು ಹಾಗಾದರೆ'– ಸೀತೆಗೆ ನಂಬಿಕೆ ಬಾರದು. ತ್ರಿಜಟೆ ಧೈರ್ಯ ಹೇಳುತ್ತಾಳೆ. ತಾನು ಕಂಡ ಕನಸಿನ ಕಥೆಯ ಫಲವನ್ನು ನುಡಿಯುತ್ತಾಳೆ. ಸಮಾಧಾನ ಹೊಂದಿದ ಸೀತೆ ಪಕ್ಕದಲ್ಲಿ ಹರಿಯುತ್ತಿರುವ ನೀರಲ್ಲಿ ಮುಖ ತೊಳೆದು, ಕುಲಗುರು ರವಿಗೆ ಅರ್ಘ್ಯವನ್ನು ಕೊಟ್ಟು ಬರುವುದಾಗಿ ತ್ರಿಜಟೆಗೆ ಹೇಳಿ ಹೊರಡುತ್ತಾಳೆ, ಆಂಜನೇಯನಡಗಿದ್ದ ಶಿಂಶುಪದ ಕಡೆಗೆ ಬಂದ ಸೀತೆಯನ್ನು ಕಂಡ ಆಂಜನೇಯ ಸಂತೋಷ ದುಃಖಗಳೆರಡೂ ಉಂಟಾಗಿ ಗದ್ಗರಿತನಾಗುತ್ತಾನೆ. ಸೀತೆಯನ್ನು ತೋರಿಸಿದ್ದಕ್ಕೆ ಸೂರ್ಯದೇವನಿಗೆ ಭಕ್ತಿಯಿಂದ ವಂದಿಸುತ್ತಾನೆ. ಸೀತೆಯ ದಾರುಣ ಸ್ಥಿತಿಯನ್ನು ಕಂಡು "ಅಯ್ಯೋ ದಾಶರಥಿ ಬಣ್ಣಿಸಿದ ಆ ಮೈಥಿಲಿಯ ಚಿತ್ರವೆಲ್ಲಿ? ಈ ದೀನ ದುಃಖಿನಿಯೆಲ್ಲಿ? ಸುಂದರ ಚಿತ್ರ ಪಟವನ್ನು ಮಸಿಯಾದ ಕೈ ಹಿಸುಕಿ ಎಸೆದಂತೆ ಕಾಣುತ್ತಿದ್ದಾಳೆ. ಇದಕ್ಕೆಲ್ಲ ಕಾರಣನಾದ ಆ ರಾಕ್ಷಸ ರಾವಣ ತನ್ನೆದುರಿನಲ್ಲೇ ಇದ್ದರೂ ನಾನೇಕೆ ಮರದಲ್ಲಿ ಮರಗಟ್ಟಿದವನಂತೆ ಕುಳಿತೆ? ತನ್ನ ವಜ್ರಮುಷ್ಟಿಯಿಂದ ಹೊಡೆದು ಕೊಂದು ಸೀತಾರಾಮ ಶೋಕದ ಕತೆಗೆ ಅಂತ್ಯ



ಮಾಡಬಹುದಿತ್ತು" ಎಂದು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾನೆ.

ಅಷ್ಟರಲ್ಲಿ ಸೀತೆ ನೀರಿನಂಚಿಗೆ ಬಂದು ನಿಂತು ಅಂತರ್ಮುಖಿಯಾಗುತ್ತಾಳೆ. ತನ್ನ ತಾಯಿಗೆ ಹೇಳುವಂತೆ, "ತಾಯಿ ಭೂದೇವಿ ನಾಥನಿದ್ದರೂ ಅನಾಥೆಯಾದ ಈ ನಿನ್ನ ಮಗಳನ್ನು ಕಾಪಾಡು. ಇಂದೇಕೋ ಮನಸ್ಸಿಗೆ ಸಂತಸ ಮೂಡುತ್ತಿದೆ. ಹರಧನುಸ್ಸನ್ನು ಬಗ್ಗಿಸಿ ನನ್ನ ಕೈ ಹಿಡಿದು ಹೂಮಾಲೆ ಹಾಕಿದಾಗ ಆದ ಹರ್ಷ ಮರುಕಳಿಸುತ್ತಿದೆ. ಇನ್ನು ಎರಡು ತಿಂಗಳೊಳಗಾಗಿ ರಾಮನ ರಕ್ಷೆ ಸಿಗದೆ ಹೋದರೆ ರಾವಣನ ಬಲಾತ್ಕರದ ದುರ್ಗತಿ ಬರುತ್ತದೆ. ಆ ಗತಿಗಿಂದ ಈ ನೀರಿನಲ್ಲಿ ಬಿದ್ದು ಆತ್ಮಹತ್ಯೆಯೇ ಮೇಲು". ಎಂದು ಹೇಳುತ್ತಿರುವಂತೆಯೇ ದುಃಖ ಒತ್ತರಿಸಿ ಬರುತ್ತಿರಲು ರಘುವಂಶಾಧಿದೇವ ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತ:

ಹೇ ಜಗತ್ ಕಲ್ಯಾಣ ಮೂರ್ತಿ,
ರಕ್ಷಿಸೊ ನಿನ್ನ ಇಕ್ಷ್ವಾಕು
ಕುಲ ಕುಮಾರ್ತಿಯ ಪುಣ್ಯಮಂ, ಮಾನಮಂ,
ಮತೆ
ವಂಶ ಗೌರವ ಕೀರ್ತಿಯಂ।
ವಿಶ್ವ ತಿಮಿರಮಂ

ಕೊರಲ್ದೈವ ನಿನಗೆ ರಾಕ್ಷಸನೆದೆಯು
ಪೊರೆಗುಹೆಯ
ಕತ್ತಲೆಯ ಕಿರು ಬಿತ್ತರಂ ಪಿರಿದೆ ?
ಕುಲಗುರುವೆ
ಕೈ ಬಿಡದಿರೆನ್ನಂ ಪತನಗತಿಗೆ, ರಕ್ಷೆಯಿರೆ
ರಘುರಾಮ ಸತಿಗೆ ನೀಂ
ಮಂಗಳ ಮಹುದೊ ದಿಟಂ
ಮತ್ ಪ್ರಾಣ ಪತಿಗೆ.

ಎಂದು ಧ್ಯಾನಮಗ್ನಳಾಗಿರಲು, ಆಂಜನೇಯ ತಾನು ಒಂದೇ ಬಾರಿಗೆ ಸೀತೆಯ ಮುಂದೆ ನಿಲ್ಲುವುದು ಸರಿಯಾಗಲಾರದೆಂದು ಯೋಚಿಸಿ ರಘುಕುಲ ಕೀರ್ತಿಯನ್ನು ಮಧುರವಾಗಿ ಹಾಡುತ್ತಾ, ಶಿವಧನುಸ್ಸನ್ನು ಎತ್ತಿ ರಘುರಾಮ ಮಿಥಿಳೇಂದ್ರನ ಕುಮಾರಿಯನ್ನು ಕೈ ಹಿಡಿದನೆಂಬಲ್ಲಿಗೆ ನಿಲ್ಲಿಸುತ್ತಾನೆ. ಈ ದಿವ್ಯವಾಣಿ ಎಲ್ಲಿಂದ ಬರುತ್ತಿದೆ ಎಂಬುದು ಗೊತ್ತಾಗದೆ ಸುತ್ತಲೂ ನೋಡಿ, ನನ್ನ ಮನಸ್ಸಿಗೆ ಆಹ್ಲಾದ ಉಂಟುಮಾಡಿದ ದನಿ ಕುಲದೈವ ರವಿಯದೊ, ಹೆತ್ತಮ್ಮ ಭೂ ದೇವಿಯದೊ, ಅಥವಾ ತನ್ನ ಭ್ರಮೆಯೊ, ರಾಕ್ಷಸ ಮಾಯೆಯೊ, ಎಂಬ ಅನುಮಾನ ಬಂದರೂ, 'ಇಲ್ಲ ಮಾಯೆಗೆ ಈ ಗಾಂಭೀರ್ಯದ ಧ್ವನಿ ಎಲ್ಲಿ ಬರಬೇಕು ಏನಾದರೂ ಸರಿ ಹೃದಯೇಶನ ರೂಪ ಗುಣಗಳನ್ನು ಕೇಳುವುದು ಆನಂದವೇ' ಎಂದು ಧ್ಯಾನ ಮಗ್ನಳಾದ ಸೀತೆಗೆ ಮತ್ತೆ ಅದೇ ಕಂಠ ಕೇಳಿಸುತ್ತದೆ. ವಿವಾಹಾನಂತರ ಅರಣ್ಯವಾಸ, ಸೀತಾಪಹರಣ, ಜಟಾಯು ಮರಣ, ಸುಗ್ರೀವ ಸಖ್ಯ, ಸಾಗರದಾಚೆ ಸೀತೆಯ ಇರವನ್ನು ತಿಳಿಯಲು ಕಾತರವಾಗಿರುವ ಕಪಿ ಸೈನ್ಯದೊಂದಿಗಿರುವ ಶ್ರೀರಾಮ, ಮಹಾ ಪರಾಕ್ರಮಿಗಳಾದ ಕಪಿ ವೀರರಲ್ಲಿ ಈ ವಿಷಯವನ್ನು ಹೇಳುತ್ತಿರುವ ತಾನು ಆಂಜನೇಯನೆಂದು ಹೇಳುತ್ತ ಆ ಶ್ರೀರಾಮ ಕೊಟ್ಟಿದ್ದ ಮುದ್ರೆಯುಂಗರವನ್ನು, ಧ್ಯಾನ ಮಗ್ನಳಾಗಿ ರವಿಗೆ ಅರ್ಘ್ಯವನ್ನೆತ್ತಿ ಹಿಡಿದ ಸೀತೆಯ ಕೈಯ್ಯಲ್ಲಿ ಹಾಕಿದ. ಉಂಗುರ ಕೈಗೆ ಬೀಳಲು ವಿಸ್ಮಯದಿಂದ ಕಣ್ತೆರದ ಸೀತೆಯ ಎದುರಿಗೆ ನಿಂತ ಆಂಜನೇಯ

ಗೆಲವಕ್ಕೆ । ಸೊಗವಕ್ಕೆ । ಶುಭಮಕ್ಕೆ ।
ಶಿವಮಕ್ಕೆ ।
ಗೆಲ್ಗೆ ಧರ್ಮಂ । ಗೆಲ್ಗೆ ಶರ್ಮಂ । ಋತಂ ಗೆಲ್ಗೆ ।
ಗೆಲ್ಗೆ ರಘುರಾಮಚಂದ್ರಂ । ಗೆಲ್ಗೆ ಮಿಥಿಳೇಂದ್ರ
ಸುತೆಯ ಹೃದಯ ಸರೋಜ ಶುಭ್ರ ಕಟ್ಮಲ
ಮಧುರ
ಮಧುಷಟ್ಪದಂ । ಗೆಲ್ಗೆ, ಸರ್ವ ಕಪಿಕುಲ ಗರ್ವ
ಧೈರ್ಯ ಪಾರಾವಾರಾಂಜನೇಯಂ ಗೆಲ್ಗೆ।
ಕೈಮುಗಿವನಿದೊ, ದೇವಿ, ಸುಗ್ರೀವನನ ಚರಂ
ಶ್ರೀರಾಮ ಸದ್ಧರ್ಮ ದೂತಂ ।

ಎಂದು ಎದುರಿಗೆ ನಿಂತು ಕೈ ಮುಗಿದ ಆಂಜನೇಯನನ್ನು ಯಾರಾದರೂ ಗಮನಿಸುವರೇನೋ ಎಂದು ಕಾತರದಿಂದ ಸೀತೆ ಸುತ್ತಲೂ ನೋಡುತ್ತಿರಲು,

"ಬೆದರ ಬೇಡ ತಾಯಿ ನನ್ನ ಈ ರೂಪ ನಿನ್ನಗಲ್ಲದೆ ಬೇರೆಯವರಿಗೆ ನೋಡಲು ಸಾಧ್ಯವಿಲ್ಲ. ನನ್ನ ಧ್ವನಿಯೂ ಬೇರೆಯವರಿಗೆ ಕೇಳಲಾಗುವುದಿಲ್ಲ. ಇಲ್ಲಿರುವ ಮಾಯಾವಿ ರಾಕ್ಷಸರಿಂದ, ನನ್ನನ್ನು ನಾನು ರಕ್ಷಿಸಿಕೊಳ್ಳಬಲ್ಲೆ. ಈಗಾಗಲೇ ಬಹಳ ಕಾಲ ಕಳೆದುಹೋಯಿತು. ಬೇಗ ರಾಮ ಸನ್ನಿಧಿಯನ್ನು ಸೇರಿ ನಿನ್ನ ಇರವನ್ನು ತಿಳಿಸಬೇಕು. ನಿನ್ನೆ ಸಂಜೆ ಈ ನಗರಕ್ಕೆ ಬಂದೆ. ಲಂಕಾದ್ವಾರದಲ್ಲಿ ನಿಂತು ಲಂಕೆಯನ್ನು ರಕ್ಷಿಸುತ್ತಿದ್ದ ಲಂಕಾಧಿದೇವಿಯನ್ನು ಭಂಗಿಸಿ, ನಗರವನ್ನೆಲ್ಲ ಶೋಧಿಸಿ ರಾಕ್ಷಸ ರಹಸ್ಯಗಳನ್ನೆಲ್ಲ ಅರಿತು ಇಂದು ಬೆಳಗ್ಗೆ ಇಲ್ಲಿಗೆ ಬಂದು ಈ ಶಿಂಶುಪಾವೃಕ್ಷದಲ್ಲಡಗಿ ನಿನಗಾಗಿ ಕಾಯುತ್ತಿದ್ದೇನೆ.

ಕಂಡೆನೆಲ್ಲಮಂ ಕಲ್ಯಾಣಿ
ಮೇಣ್ ಕೇಳ್ದೆನಖಿಲಮಂ ನಿನ್ನ ಕೀರ್ತಿಗೆ
ಮತ್ತೆ
ತೇಜಕ್ಕೆ ಕೋಡು ಮೂಡಿಪ ದಿವ್ಯಭಾಷಣ
ವದಂ
ಧನ್ಯನಾ ಆಲಿಸಿದೆನಾತ್ಮ ಸಂಸ್ಫೂರ್ತಿಕರಮಂ
ನಿನ್ನಸ್ಖಲಿತಚಿತ್ತ ವೃತ್ತಾಂತಮಂ. ಪೂಜ್ಯೆ
ಕಂಡುದೆಲ್ಲವನೊರೆವೆನಾ ರಾಮಭದ್ರಂಗೆ.

ನಾನು ಹೇಳುವುದೇ ಸಾಕಾದರೂ ನಿನ್ನನ್ನು ಕಂಡದ್ದಕ್ಕೆ ಒಂದು ಕುರುಹನ್ನು ಕೊಡು— ಎಂದು ಕೈಮುಗಿದು ನಿಂತ ಆಂಜನೇಯನನ್ನು ಹೆಮ್ಮೆಯಿಂದ ಈಕ್ಷಿಸಿ, ರಾಮ ಮುದ್ರಿಕೆಯನ್ನು ಕಣ್ಗೊತ್ತಿ, ಪ್ರೇಮರಸಾನುಭವದಲ್ಲಿ ತೇಲುವಂತಾಗಿ ಆಂಜನೇಯನ ಮಾತಿಗೆ ಉತ್ತರ ಕೊಡುವುದು ನಿದಾನವಾದುದಕ್ಕೆ ನೊಂದು,

"ಹೇ ಕಪಿವೀರ, ರಾಮವಾರ್ತೆ ತಿಳಿದ, ರಾಮ ಮುದ್ರಿಕೆ ದೊರೆತ ಸಂತೋಷ ಒಂದು ಕಡೆಯಾದರೆ ಈ ಶುಭವಾರ್ತೆಯನ್ನು ಕಂಡ ನೀನು ಬೇಗ ಮರೆಯಾದರೆ ನಾನು ಕಂಡದ್ದು ಭ್ರಮೆಯೆಂದು ಭ್ರಮಿಸಿ ಮತ್ತೆ ದುಃಖಸಾಗರದತ್ತ ಮನ ಹೋಗದಿರಲಿ" ಎಂದು ನೊಂದು ನುಡಿಯಲು, ನಿಷ್ಕಾರಣ ಶಂಕೆಗೆ ಆಸ್ಪದ ಬೇಡವೆಂದ ವಾನರೋತ್ತಮನು ರಾಮ ಮುದ್ರಿಕೆಯನ್ನು ನೋಡುತ್ತಿರುವುದಕ್ಕಿಂತ ಮಿಗಿಲಾದ ಸಾಕ್ಷಿ ಬೇಕೆ ಮುಂದಿನ ಶುಭಕ್ಕೆ ಎಂದು ಧೈರ್ಯ ತುಂಬುತ್ತಾನೆ. ಪುಟ್ಟ ಆಕಾರದಿಂದ ಬಂದ ದಿವ್ಯ ನುಡಿಗಳಿಗೆ ಹರ್ಷಿತಳಾದ ಸೀತೆ.

"ನನ್ನ ಕಾರಣಕ್ಕಾಗಿ ಸಾಗರವನ್ನು ದಾಟಿ ಬಂದು ರಘುರಾಮನ ವಾರ್ತೆ ಕಂಡ ನಿನ್ನನ್ನು ಅನುಮಾನಿಸುತ್ತಿಲ್ಲ, ಪರಮ ದುಃಖಿಯಾದ ನನ್ನ ಬುದ್ಧಿಗೆ ಮಂಕು ಬಡಿದಿದೆ" ದಯವಿಟ್ಟು ಹೇಳು ಸೋದರ—

ಪ್ರಾಣೇಶನೆಂತಿಹನ್ ? ಪ್ರಾಣ ಪತಿ
ಯೆಲ್ಲಿಹನ್ ?
ಪ್ರಾಣವಲ್ಲಭನೇಕೆ ತಳುವಿಹನ್ ? ವಿರಹದಿಂ
ಕವಿದಿಹನೊ? ಶೋಕದಿಂ ತಪಿಸಿಹನೊ ?
ಕೊರಳ ಸೆರೆ
ಬಿಗಿದು ಸಂಕಟವುಕ್ಕುತಿರೆ ಮರಳಿ,
'ನೆನೆಯುವ;
ಮರೆತಿಲ್ಲನಲ್ತೆ ಈ ದೀನ ಹತ ಭಾಗ್ಯೆಯಂ?
ಸಹಜಸುಖಿ ಯಾತಂಗೆ
ಸಕಲ ಶೋಕವನಿತ್ತ ಈ
ಮಂದ ಮತಿಯಂ ?

ಎಂದು ಕೊರಳುಬ್ಬಿ ಬಂದು ದುಃಖಿಸಲು ಆಂಜನೇಯ "ನಿನ್ನ ಇರವು ಗೊತ್ತಿಲ್ಲದೆ ನಿನ್ನನ್ನಗಲಿದ ರಾಮನಿಗೆ ನಿನ್ನ ಬಿಟ್ಟು ಬೇರೆ ಜೀವನವೇ ಇಲ್ಲ. ಹಗಲಿರುಳು, ಕನಸು ಮನಸಿನಲ್ಲಿಯೂ ನೀನೇ ತುಂಬಿರುವೆ.ಮರಗಿಡ, ಬಳ್ಳಿ ಎಲ್ಲದರಲ್ಲೂ ನಿನ್ನನ್ನೇ ಕಾಣುತ್ತ "ಓ ಸೀತೆ, ಮೈಥಿಲಿ" ಎಂದು ಮೂರು ಹೊತ್ತು ಮರುಗುವ ರಾಮನ ಪ್ರೇಮದ ಬಗ್ಗೆ ಶಂಕೆ ಬೇಡ. ನಿನಗಾಗಿ ರಾಮನಿಂದು ತಪಸ್ವಿಯಾಗಿದ್ದಾನೆ. ಕಂದಮೂಲಗಳನ್ನಾಗಲಿ, ಮಾಂಸ ಮಧ್ಯಗಳನ್ನಾಗಲಿ ಮುಟ್ಟದೆ ನಿನ್ನ ಧ್ಯಾನದಲ್ಲೇ ಮಗ್ನನಾಗಿದ್ದಾನೆ". ಎನ್ನಲು,

ಈ ಮಾತುಗಳನ್ನು ಕೇಳಿದ ಸೀತೆಗೆ ಬೇವು ಬೆಲ್ಲ ಒಂದೇ ಸಾರಿ ಸವಿದ ಅನುಭವವಾಗಿ. ಅವನನ್ನು ಆಶೀರ್ವದಿಸುತ್ತಾಳೆ. ಮತ್ತೆ ಲಂಕೆಯಲ್ಲಿ ತನ್ನ ಸ್ಥಿತಿಯನ್ನು ವಿವರಿಸುತ್ತ—

"ರಾವಣ ಪತ್ನಿ ಮಂಡೋದರಿಯ ದಯೆಯಿಂದ ಒಂದು ವರ್ಷದ ಅವಧಿ ನನಗೆ ಸಿಕ್ಕಿದೆ. ಈಗ ಹತ್ತು ತಿಂಗಳು ತುಂಬಿ, ಉಳಿದಿದೆ ಎರಡು ತಿಂಗಳು ಮಾತ್ರ. ಅಷ್ಟರೊಳಗೆ ರಾಮಚಂದ್ರನು ಬಂದು ತನ್ನನ್ನು ಕರೆದೊಯ್ಯಬೇಕು. ಇಲ್ಲದಿದ್ದರೆ ಮರಣವೇ ಶರಣೆಂದ ಸೀತೆಯನ್ನು ಕಂಡ ಆಂಜನೇಯನಿಗೆ ತಡೆಯಲಾಗದೆ"ತಾಯಿ ನೀನೊಪ್ಪುವುದಾದರೆ ಈಗಲೇ ನನ್ನ ಬೆನ್ನ ಮೇಲೆ ಕುಳಿತುಕೊ ಕ್ಷಣ ಮಾತ್ರದಲ್ಲಿ ಎತ್ತಿಕೊಂಡು ಹೋಗಿ ರಾಮಭದ್ರನ ಹತ್ತಿರ ಇಳಿಸುತ್ತೇನೆ" ಎನ್ನುವ. ಆಂಜನೇಯನ ಪುಟ್ಟರೂಪವನ್ನು ಕಂಡ ಭೂಜಾತೆ ಈ ಪುಟ್ಟ ಆಕಾರದ ನೀನು ಎಂತು ಎತ್ತಿಕೊಂಡೊಯ್ವೆ ನನ್ನ ಎನ್ನಲು, ಆಂಜನೇಯ ಸೀತೆಯ ಅನುಮಾನ ನಿವಾರಿಸಲು, ತನ್ನ ಯೋಗ ಶಕ್ತಿಯಿಂದ ಮಹಾಕಾಯನಾಗಿ ಬೆಳೆದು ನಿಂತು "ತಾಯೆ ನೋಡಿದೆಯ, ನನ್ನ ಮಹದ್ರೂಪವನ್ನು ಈ ಸಾಗರವನ್ನು ಒಂದು ಗೋಪಾದದಲ್ಲಿ ನಿಂತ ನೀರನ್ನು ದಾಟುವಂತೆ ದಾಟಿ, ಸೇರುವೆ ರಾಮ ಸನ್ನಿಧಿಯ" ಎನ್ನಲು, ಸೀತೆ—

"ವಾನರ ಪುಂಗವ,ನಿನ್ನ ಭೀಮಬಲದಲ್ಲಿ ನನಗೆ ಭಯವಿಲ್ಲ, ಆದರೆ ನೀವೆಲ್ಲ ಯಾರಿಗಾಗಿ ಇಷ್ಟೆಲ್ಲ ಕಷ್ಟಪಡುತ್ತಿರುವಿರೊ ಅದು ವ್ಯರ್ಥವಾಗಬಾರದು; ನಿನ್ನ ಬೆನ್ನೇರಿ ನಾನು ಬಂದರೆ, ರಾಕ್ಷಸ ಸೇನೆ ನಿನ್ನನ್ನು ಅಡ್ಡಗಟ್ಟಿ ಯುದ್ಧ ಮಾಡುವಾಗ ನಾನು ಸಾಗರಕ್ಕೆ ಬಿದ್ದರೆ, ರಾಮಕಾರ್ಯ ಅಂತ್ಯವಾಗದೆ ? ಆದ್ದರಿಂದ ನೀನು ನನ್ನ ಇರವಿನ ವಾರ್ತೆ

(24ನೇ ಪುಟ ನೋಡಿ)

(19 ನೇ ಪುಟದಿಂದ)

ರತ್ನ ಮಾಲಿಕೆಯನ್ನು ನಿನಗೆ ಅರ್ಪಿಸಲು ರಚಿಸಿರುವ ತ್ಯಾಗರಾಜನಿಗೆ ವರಗಳನ್ನು ಅನುಗ್ರಹಿಸುವುದಕ್ಕಾಗಿ ಅವತರಿಸಿದೆಯಾ ?" ಎಂದು ಕೇಳಿದ್ದಾರೆ. (ಏಲಾವತಾರ–ಮುಖಾರಿ–ಆದಿ).

ದಕ್ಷಿಣ ಭಾರತದಲ್ಲಿ ವೈಷ್ಣವಭಕ್ತಿ ಸಂಪ್ರದಾಯ ಪ್ರವರ್ತಕರಿಂದ ಮೊದಲಾಗಿ ಅನೇಕ ಪ್ರವಚನಕಾರರು ಕವಿಗಳು ಮತ್ತು ಭಾಗವತರಿಂದ ವಾಲ್ಮೀಕಿರಾಮಾಯಣವು ಬಹು ಜನಪ್ರಿಯವಾಯಿತು. ಶ್ರೀರಾಮನನ್ನು ಇಷ್ಟದೇವತೆಯಾಗಿ ಆರಿಸಿಕೊಂಡ ವಾಗ್ಗೇಯಕಾರ ಹಾಗೂ ಭಕ್ತರಲ್ಲಿ ಭದ್ರಾಚಲ ರಾಮದಾಸರು ಅಗ್ರಗಣ್ಯರಾಗಿದ್ದರು. ಇವರ ಜೀವನ, ಸಾಧನೆ ಮತ್ತು ಕೃತಿಗಳು ತ್ಯಾಗರಾಜರ ಮೇಲೆ ಪ್ರಭಾವ ಬೀರಿದುವು. ತಿರುವಿಶನಲ್ಲೂರಿನ ರಾಮಭದ್ರ ದೀಕ್ಷಿತರು ಕವಿಗಳಾಗಿದ್ದು ಶ್ರೀರಾಮನನ್ನು ಕುರಿತು ರಚಿಸಿದ ಸ್ತೋತ್ರಗಳು ಚೋಳದೇಶದಲ್ಲೆಲ್ಲಾ ಜನಪ್ರಿಯವಾಗಿದ್ದುವು. ಇವರು ಅಯ್ಯಾವಾಳ್‌ರವರ ಸಮಕಾಲೀನರು. ಇದಲ್ಲದೆ ತ್ಯಾಗರಾಜರ ತಂದೆ ರಾಮಬ್ರಹ್ಮರೂ ರಾಮನ ಭಕ್ತರಾಗಿದ್ದರು. ಇವರ ಸಹಾಧ್ಯಾಯಿಯಾಗಿದ್ದ ಉಪನಿಷದ್ ಬ್ರಹ್ಮರೂ ರಾಮಭಕ್ತರಾಗಿದ್ದರು. ಈ ಕಾರಣಗಳಿಂದ ತ್ಯಾಗರಾಜರು ಗರ್ಭಭಾಗವತರಾಗಿದ್ದರು. 'ರಾಮ ನೀ ಸಮಾನಮೆವರು' (ಖರಹರಪ್ರಿಯ) ಎಂಬ ಕೃತಿಯ ಕೊನೆಯಲ್ಲಿ ಶ್ರೀರಾಮನು ತಮ್ಮ 'ಕುಲದೈವತ'ವೆಂದೂ, ಪಲುಕವೇಮಿ (ಪೂರ್ಣಚಂದ್ರಿಕ) ಎಂಬ ಕೃತಿಯಲ್ಲಿ 'ನನ್ನ ಮಾತಾಪಿತೃಗಳು ನನಗೆ ಭಕ್ತಿಯನ್ನು ಕೊಟ್ಟು ರಕ್ಷಿಸಿದರು' (ತಲ್ಲಿ ತಂಡ್ರಿ ಭಕ್ತಿ ನೊಸಗಿ ರಕ್ಷಿಂಚಿರಿ) ಎಂದಿದ್ದಾರೆ. ಇನ್ನಾಳ್ಳು (ನಾರಾಯಣ ಗೌಳ) ಎಂಬ ಕೃತಿಯಲ್ಲಿ ಮತ್ತೊಮ್ಮೆ ಶ್ರೀರಾಮನನ್ನು ತಮ್ಮ 'ಕುಲಧನ'ವೆಂದಿದ್ದಾರೆ.

ಶ್ರೀರಾಮನಿಗೆ ಸಂಬಂಧಿಸಿದ ಧಾರ್ಮಿಕ ಸಾಹಿತ್ಯದಲ್ಲಿ ಗುಣ ಮತ್ತು ಪ್ರಮಾಣದ ದೃಷ್ಟಿಯಿಂದ ತ್ಯಾಗರಾಜರ ಕೃತಿಗಳು ಗುರುತರವಾದ ಭಾಗವಾಗಿವೆ.

ಶ್ರೀರಾಮನು ಭಗವಂತನ ಅವತಾರ. ರಾಮಭಕ್ತಿ ಸಿದ್ಧಾಂತರೀತ್ಯಾ ರಾಮನೆಂದರೆ ಪರಬ್ರಹ್ಮ.

ರಮಂತೇ ಯೋಗಿನೋಽನಂತೇ
ಸತ್ಯಾನಂದೇ ಚಿದಾತ್ಮನಿ ।
ಇತಿ ರಾಮಪದೇ ನಾಸೌ
ಪರಂ ಬ್ರಹ್ಮಾಭಿಧೀಯತೇ ॥
(ರಾಮಪೂರ್ವತಾಪನಿ ಉಪನಿಷದ್)

ಪಾಹಿ ಕಲ್ಯಾಣರಾಮ (ಕಾಪಿ) ಎಂಬ ಕೃತಿಯ 12ನೆಯ ಚರಣದಲ್ಲಿ ರಾಮನೆಂದರೆ ಪರಬ್ರಹ್ಮ (ಪರಮ್ಯೆನ ಬ್ರಹ್ಮಯು) ಎಂದಿದ್ದಾರೆ ತ್ಯಾಗರಾಜರು. ಇವರ ಅನೇಕ ಕೃತಿಗಳಲ್ಲಿ ರಾಮನೊಬ್ಬನೇ ಪರಬ್ರಹ್ಮ, ಆದ್ಯಂತರಹಿತ, ಆದಿಮಧ್ಯಾಂತರಹಿತ (ನೀದಯ ರಾವಲೆಗಾಕ–ತೋಡಿ, ಏದಾರಿಸಂಚರಿಂತುರಾ-ಕಾಂತಾಮಣಿ), ಅವಾಙ್ಮಾನಸಗೋಚರ (ದುಡುಕುಗಲ–ಗೌಳ), ಅವಿಕೃತ (ಜಗದಾನಂದಕಾರಕ–ನಾಟ), ಅಖಂಡರೂಪ (ಶ್ರೀರಾಮ ರಾಮ – ಪೂರ್ಣಚಂದ್ರಿಕಾ), ಅದ್ವೈತ (ಸುಂದರ ತರದೇಹಂ–ಕಾಮವರ್ಧಿನಿ), ನಾಮರೂಪ ರಹಿತ (ಸರ್ವಲೋಕ–ಹುಸೇನಿ), ನಿರ್ಗುಣ ಮತ್ತು ನಿರ್ಗುಣರೂಪ (ಹರಿ ಹರಿ ನೀಯೊಕ್ಕ, ನಾಥ ಬ್ರೋವವೇ–ಭೈರವಿ.), ಸಚ್ಚಿದಾನಂದ, ಪುರಹರ ಸರೋಜಭವ ಕೇಶವಾದಿ ರೂಪ ಮತ್ತು ತ್ರಿಮೂರ್ತಿಗಳಿಗೂ ಮೇಲ್ಪಟ್ಟವನು ಅವನೇ ಬ್ರಹ್ಮ, ವಿಷ್ಣು ಮತ್ತು ಶಿವರಿಗೆ ತಮ್ಮ ಕ್ಷೇತ್ರಗಳಲ್ಲಿ ಅಧಿಕಾರವನ್ನು ಕೊಟ್ಟು ನಿಯಮಿಸಿದ್ದಾನೆ (ಮನಸಾ ಶ್ರೀರಾಮಚಂದ್ರುನಿ – ಈಶಮನೋಹರಿ). ತ್ರಿಮೂರ್ತಿಗಳಿಗೆ ಕಾಕಾಸುರನನ್ನು ರಾಮಬಾಣದಿಂದ ರಕ್ಷಿಸಲು ಆಗಲಿಲ್ಲ. ರಾವಣನ ವಧೆಯನಂತರ ಅವರು ಶ್ರೀರಾಮನನ್ನು ಸ್ತುತಿಸಿದರು. (ಏಮಿದೋವ–ಸಾರಂಗ) ರಾಮನು ತ್ರಿಮೂರ್ತಿಗಳಿಗೆ ಪ್ರಭು (ಹರಿ ಪದ್ಮಜ ಸರ್ವೇಶ ರಾಮ ಏವದೈವತಮ'–ಬಲಹಂಸ). ಅವನು ಸತ್ತ್ವ, ರಜಸ್ಸು ಮತ್ತು ತಮಸ್ಸುಗಳನ್ನು ಮೀರಿದವನು. ಅವನು ದೋಷರಹಿತ (ಎಂದುಂಡಿ ವೆಡಲಿತಿವೋ – ದರ್ಬಾರ್). ಅವನು ಶತ್ರುಗಳಿಗೂ ದಯೆಯುಳ್ಳವನು. ಅವನು ಇರುವೆಯಿಂದ ಮೊದಲ್ಗೊಂಡು ಎಲ್ಲಾ ವಸ್ತುಗಳಲ್ಲೂ ಚೇತನಗಳಲ್ಲೂ ಇರುವವನು. (ರಾಮ ನನ್ನು ಬ್ರೋವರಾ–ಹರಿಕಾಂಭೋಜಿ) (ನಿಜಮುಗ ನೀ ಮಹಿಮಲು–ಶಹಾನ). ಅವನು ಒಳ್ಳೆಯದರಲ್ಲೂ, ಕೆಟ್ಟದರಲ್ಲೂ ಎಲ್ಲದರಲ್ಲೂ ಇದ್ದಾನೆ. (ಸಗುಣಮುಲೋ ವಿಗುಣಮುಲೋ ಸತತಮು–ಪರಮಾತ್ಮುಡು–ವಾಗಧೀಶ್ವರಿ). ಇದು 'ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹ ಮರ್ಜುನ'–ಎಂಬ ಗೀತಾವಾಕ್ಯದ ಪ್ರತಿಧ್ವನಿಯಾಗಿದೆ. ಉಪನಿಷತ್ತಿನ ಮಹಾವಾಕ್ಯವಾದ 'ತತ್ತ್ವಮಸಿ' ಎಂಬುದರ ಅರ್ಥವೇ ರಾಮ (ತತ್ತ್ವಮೆರುಗ–ಗರುಡಧ್ವನಿ). ಗರುಡನು ವಿಷ್ಣುವಿನ ವಾಹನ. ಗರುಡ ಎಂದರೆ ಛಂದಸ್ ಅಥವಾ ವೇದ. ಉಪನಿಷತ್ತಿನ ಸತ್ಯವನ್ನು ಹೇಳಲು ತ್ಯಾಗರಾಜರು ರಾಗದ ಹೆಸರನ್ನು ಗರುಡಧ್ವನಿ ಎಂದು ಹೇಳಿರುವುದು ಅರ್ಥಗರ್ಭಿತವಾಗಿದೆ.

ತ್ಯಾಗರಾಜರಿಗೆ ರಾಮನೇ ಇಷ್ಟದೈವ. (ಇಷ್ಟದೈವಮು ನೀವೆ ಶ್ಯಾಮಸುಂದರಾಂಗ–ಧನ್ಯಾಸಿ; ರಾಮ ಏವ ದೈವತಂ ರಘುಕುಲ ತಿಲಕೋಮೇ – ಬಲಹಂಸ) ; ರಾಮನೇ ಪರಬ್ರಹ್ಮ (ವಾಡೇರಾ ದೈವಮು, ಉಂಡೇದಿ ರಾಮುಡೊಕಡು). ಭಗವಂತನ ಅವತಾರಗಳಲ್ಲಿ ರಾಮಾವತಾರವೆ ಅತ್ಯಂತ ಶ್ರೇಷ್ಠವಾದುದು. (ಮದಿಲೋನ ಯೋಚನ–ಕೋಲಾಹಲ;- ಪದಿ ವೇಷಮುಲಲೋ ರಾಮ ವೇಷಮು ಬಹುಬಾಗನುಚು) ಕೃಷ್ಣಾವತಾರವು ಪೂರ್ಣಾವತಾರವೆಂದು ಪರಿಗಣಿಸಲ್ಪಟ್ಟಿದ್ದರೂ ತ್ಯಾಗರಾಜರಿಗೆ ರಾಮಾವತಾರವೇ ಪೂರ್ಣಾವತಾರ. (ರಘುಪತೇ ರಾಮ–ಶಹಾನ), ಮಾನವನು ಅತ್ಯುನ್ನತಿಯನ್ನು ಹೇಗೆ ಪಡೆಯಬಹುದು ಎಂಬುದನ್ನು ಈ ಅವತಾರದಿಂದ ಪರಮಾತ್ಮನು ನರೋತ್ತಮ, ನರವರ ಅಥವಾ ಪುರುಷೋತ್ತಮನಾಗಿ ತೋರಿಸಿಕೊಟ್ಟನು. ಅವನು ನರವರ, ಏಕೆಂದರೆ ಅವನು ಸುಚರಿತ್ರ, ಶುಭ ಚರಿತ್ರ, ಸ್ತುತ್ಯಚರಿತ್ರ ಮತ್ತು ನಿರುಪಮ ಗುಣಶೀಲ (ನಾರದಗಾನಲೋಲಾ–ಅಠಾಣ). ಯಾವದೇವರನ್ನೇ ನೋಡಲಿ ಅಲ್ಲಿ ಅವರು ತಮ್ಮ ರಾಮನನ್ನೇ ಕಾಣುತ್ತಿದ್ದರು. (ಪರದೈವಮುಂ ಜೂಚುನಂತನೇ ಭಾವಮಂದು ನೀವೇ ಬರಗೆದವಯ್ಯ – ನೀ ಚಿತ್ತಮು — ವಿಜಯವಸಂತ). ರಾಮನಾಮದಂತೆಯೇ ರಾಮಚರಿತವೂ ತಾರಕಚರಿತ್ರ ಮತ್ತು ತಾರಕ ಶುಭಕರ (ಮರಿಯಾದ–ಶಂಕರಾಭರಣ ; ಎಂದುಕು ದಯ ತೋಡಿ ; ಪಾಹಿಪಾಹಿ–ಸೌರಾಷ್ಟ್ರ). ಅವನ ಅನಂತ ಕಲ್ಯಾಣ ಗುಣಗಳು ರಾಮಾವತಾರವನ್ನು ವಿಶಿಷ್ಟ ಅವತಾರವಾಗಿಸಿವೆ. ಶ್ರೀರಾಮನು ಭವ್ಯ ಗುಣಮಣಿ ಕೋಶ ಮತ್ತು ಸುಗುಣ ಮಣಿಕೋಶ (ಜನಕಜಾಸಮೇತ–ಅಸಾವೇರಿ; ಮರಿಪೇಮು–ಮುಖಾರಿ). ತ್ಯಾಗರಾಜರ ಕೃತಿಗಳಲ್ಲಿ 50 ಕ್ಕಿಂತಲೂ ಹೆಚ್ಚಾಗಿ ಶ್ರೀರಾಮನ ಕಲ್ಯಾಣ ಗುಣಗಳನ್ನು ಹೇಳಿದ್ದಾರೆ.

ಅಧಃಪತನಗೊಂಡ ಮಾನವನನ್ನು ಉದ್ಧಾರ ಮಾಡಲು ರಾಮನು ನರವರನಾಗಿ ಅವತರಿಸಿದನು. ಉತ್ತಮ ಆದರ್ಶಗಳನ್ನು ಎತ್ತಿ ಹಿಡಿದು ತಾನೇ ಆದರ್ಶ ಪುರುಷನಾದನು. ರಾಮನ ವಿರುದ್ಧನಾದವನು ಅಧಃಪತನಗೊಂಡ ಮಾನವ. ಆದ್ದರಿಂದ ತ್ಯಾಗರಾಜರು ರಾಮನನ್ನು ರಾಗಾದಿ ಸಂಹಾರ, ರಾಗಮದದೂರ, ಮದ ಮಾನವ ಗಣಭೀಮ ; ಕಾಮಾದಿರಿಪು ವಿದಾರ, ಕಾಮಾದಿ ಷಡ್ಗುಣ ಹರ, ತಾಮಸ ಜನ ಹೃದಯದೂರ ; ತಾಮಸರಾಜಸ ಮಾನಸದೂರನೆಂದು ಹೇಳಿದ್ದಾರೆ. ರಾಮನು ಯಾವ ಗುಣಗಳ ಪ್ರತೀಕನಾಗಿದ್ದನೋ ಅದಕ್ಕೆ ವಿರುದ್ಧವಾಗಿದ್ದವರೇ ಅವನು ನಾಶ ಮಾಡಿದ ರಾಕ್ಷಸರು. ಅವನು ಗುಣಾಸುರಗಣ ಮದಹರಣ (ಜಗದಾನಂದಕಾರಕ – ನಾಟ). ರಾಮನು ಧರ್ಮ ಮತ್ತು ಸತ್ಯದ ವಿಗ್ರಹ. ಅವನ ಅನಂತ ಗುಣಗಳು ಅವನ ವ್ಯಕ್ತಿತ್ವದ ಪ್ರತೀಕ.

ಶ್ರೀರಾಮನನ್ನು ತ್ಯಾಗರಾಜರು ನೂರಾರು ಗುಣವಾಚಕಗಳಿಂದ ವರ್ಣಿಸಿದ್ದಾರೆ. ಅವುಗಳಲ್ಲಿ

ಒಂದು ಮುಖ್ಯವಾದುದೆಂದರೆ ಅವನ ರೂಪ' ಅತ್ಯಂತ ಪ್ರಿಯದರ್ಶನ (ರಾಮೋ ರಮಯತಾಂ ವರಃ – ವಾಲ್ಮೀಕಿ). ಇದನ್ನು ಕಾಳಿದಾಸನು ಮತ್ತಷ್ಟು ವಿಶದೀಕರಿಸಿ ಅವನ ಸುಂದರ ರೂಪ ವನ್ನು ನೋಡಿ ವಶಿಷ್ಠರು ರಾಮ ಎಂದು ಹೆಸ ರಿಟ್ಟರು ಎಂದಿದ್ದಾನೆ. (ರಾಮ ಇತ್ಯಭಿರಾಮೇಣ ವಪುಷಾ ತಸ್ಯ ಚೋದಿತಃ।–ರಘುವಂಶ 10–67) ರಾಮನು ತನ್ನ ಸೌಂದರ್ಯ ಮತ್ತು ಔದಾರ್ಯ ದಿಂದ ಎಲ್ಲರಿಗೂ ಆನಂದ ನೀಡುವವನು. ಯಾರ ದೃಷ್ಟಿಯು ರಾಮನ ಮೇಲೆ ಬೀಳುವುದಿಲ್ಲವೋ ಯಾರ ಮೇಲೆ ರಾಮನ ದೃಷ್ಟಿಯು ಬೀಳುವು ದಿಲ್ಲವೋ ಅವನು ಪಾಪಿ. ಅಂತಹವನ ಆತ್ಮವೇ ಅವನನ್ನು ತ್ಸಣೀಕರಿಸುತ್ತದೆ.

(ಚಂದ್ರಕಾಂತಾನನಂ ರಾಮಮತೀವ ಪ್ರಿಯ ದರ್ಶನಮ್। ರೂಪೌದಾರ್ಯ ಗುಣೈಃ ಪುಂಸಾಂ ದೃಷ್ಟಿಚಿತ್ತಾಪಹಾರಿಣಮ್॥ ಯಶ್ಚ ರಾಮಂ ನ ಪಶ್ಯೇತ್ತು ಯಂ ಚ ರಾಮೋ ನ ಪಶ್ಯತಿ। ನಿಂದಿತಸ್ಯ ವಸೇಲ್ಲೋಕೇ ಸ್ವಾತ್ಮಾಪ್ಯೇನಂ ವಿಗರ್ಹತೇ॥ –ರಾಮಾಯಣ)

ಆದ್ದರಿಂದಲೇ ತ್ಯಾಗರಾಜರು ರಾಮನನ್ನು 'ಶ್ಯಾಮ ಸುಂದರಾಂಗ ಸಕಲ ಶಕ್ತಿಯು ನೀವೇರ' ಎಂದಿರುವುದು. ರಾಮನು ಅರಣ್ಯಕ್ಕೆ ಹೋದಾಗ ರಾಕ್ಷಸರನ್ನು ನಾಶಮಾಡುವುದಾಗಿ ಋಷಿಗಳಿಗೆ ಮಾತುಕೊಟ್ಟನು. ಅವನ ವದನವು ಸೂರ್ಯ ಕಾಂತಿಯಂತೆ ಜಾಜ್ವಲ್ಯಮಾನವಾಗಿತ್ತು. (ಮುದ್ದುಮೋಮು — ಸೂರ್ಯಕಾಂತ) ಈ ರಾಗದ ಹೆಸರು ಅರ್ಥಗರ್ಭಿತವಾಗಿದೆ. ಸೂರ್ಯ ನಂತೆ ತೇಜಃಪುಂಜವಾಗಿದ್ದರೂ ಚಂದ್ರನಂತೆ ಮನ ಮೋಹಕವಾಗಿತ್ತು. ಅವನ ದೇಹದ ಪ್ರತಿಯೊಂದು ಭಾಗವೂ ಆಕರ್ಷಕ (ಎಂದು ಕೌಗಲಿಂತುರಾ– ಶುದ್ಧದೇಶಿ) (ಪುಂಸಾಂ ಮೋಹನರೂಪಾಯ) ಮೋಹರಹಿತವಾದ ಮಧ್ಯಮಾವಸ್ಥೆಯಲ್ಲಿರುವ ಋಷಿಗಳೂ ಕೂಡ ರಾಮನ ಸೌಂದರ್ಯಕ್ಕೆ ಮಾರುಹೋಗುತ್ತಿದ್ದರು.

"ಓ ರಾಮ! ನಿನ್ನ ದೇಹದ ಪ್ರತಿಯೊಂದು ಅಂಗವೂ ಬಹು ಸುಂದರವಾಗಿ ಆಕರ್ಷಿಸುತ್ತಿದೆ. ಯಾವ ಭಾಗವನ್ನು ನಾನು ಆಲಿಂಗಿಸಲಿ? ನಿನ್ನ ಮಾತೇ ಮಾತು, ನಿನ್ನ ಕುಲುಕೇ ಕುಲುಕು; ನಿನ್ನ ತೇಜಸ್ಸೇ ತೇಜಸ್ಸು" (ಎಂದು ಕೌಗಲಿಂತುರಾ ನೇನೆಂತನಿ ವರ್ಣಿಂತುರಾ; ನೀದು ಪಲುಕೇ ಪಲುಕುರಾ. ನೀದು ಕುಲುಕೇ ಕುಲುಕುರಾ. ನೀದು ತಳುಕೇ ತಳುಕುರಾ – ಶುದ್ಧದೇಶಿ) ಎಂದಿದ್ದಾರೆ ತ್ಯಾಗರಾಜರು. ಅವನ ಸೌಂದರ್ಯ ವನ್ನು ಅನುಭವಿಸಿದ ಕೌಸಲ್ಯೆ, ದಶರಥ, ಲಕ್ಷ್ಮಣ, ವಿಶ್ವಾಮಿತ್ರ, ಅಹಲ್ಯಾ, ಶಿವಧನುಸ್ಸು, ಜನಕ ಇವರೆಲ್ಲರ ಸುಯೋಗ ತನಗೆ ದೊರಕಬೇಕೆಂದು ಹಂಬಲಿಸಿದ್ದಾರೆ. (ಶ್ರೀ ರಾಮ ರಘುರಾಮ ಶೃಂಗಾರರಾಮಯನಿ ಚಿಂತಿಂಚರಾದೇ ಓ ಮನಸಾ – ಯದುಕುಲ ಕಾಂಭೋಜಿ). ಮಾರೀಚನ ಮೇಲೆ ಬಾಣ ಪ್ರಯೋಗಮಾಡಿದಾಗ ಅಥವಾ ಶಿವಧನುಸ್ಸನ್ನು ಭಂಗಿಸಿದಾಗ ಅಲು ಗಾಡಿದ ಮುಂಗುರುಳುಳ್ಳ ರಾಮನ ಸುಂದರವಾದ ಮುಖವನ್ನು ನೋಡಿ ಅತ್ಯಾನಂದ ಪಡೆದ ವಿಶ್ವಾ ಮಿತ್ರರ ಭಾಗ್ಯವೆಂತಹುದು ಎಂದಿದ್ದಾರೆ. (ಅಲಕಲಲ್ಲಲಾಡಗ ಗನಿ ಆರಾಮುನಿ ಎಟು ಪೊಂಗೆನೋ – ಮಧ್ಯಮಾವತಿ) ಬಹು ಕಃ ಋಷಿಗಳ ಮಧ್ಯಮಾವಸ್ಥೆಯನ್ನು (ಕಾಮ ಮತ್ತು ದ್ವೇಷರಹಿತವಾದ ಅವಸ್ಥೆ) ಮನಸ್ಸಿನಲ್ಲಿಟ್ಟು ಕೊಂಡು ಈ ಕೃತಿಯನ್ನು ಮಧ್ಯಮಾವತಿರಾಗ ದಲ್ಲಿ ರಚಿಸಿರಬೇಕು. ಹಾಗೆಯೇ, 'ಲಾವಣ್ಯ ರಾಮ' ಎಂಬ ಕೃತಿಯ ರಾಗವು ರುದ್ರಪ್ರಿಯ ಆಗಿರುವುದು ಬಹು ಸೂಕ್ತ. ಏಕೆಂದರೆ ರಾಮನ ಸೌಂದರ್ಯವು ಶಿವನಿಗೆ ಬಹು ಪ್ರಿಯವಾಗಿದ್ದು ದಲ್ಲದೆ ಅವನೇ ರಾಮಮಂತ್ರವನ್ನು ಎಲ್ಲರಿಗೂ ಉಪದೇಶಿಸುತ್ತಿದ್ದನು. (ಲಾವಣ್ಯ ರಾಮ, ಕನುಲಾರ ಜೂಡವೇ; ಅತಿ ಲಾವಣ್ಯರಾಮ!... ನೀ ಮನಸು ನೀ ಸೊಗಸು ನೀ ದಿನುಸು ವೇರೆ; ತಾಮಸ ಮತದೈವಮೇಲ ತ್ಯಾಗರಾಜನುತ ದಿವ್ಯ ಲಾವಣ್ಯ ರಾಮ॥)

"ಬಹು ಲಾವಣ್ಯ ರಾಮ! ನಿನ್ನ ಕೃಪಾಕಟಾಕ್ಷ ದಿಂದ ನನ್ನನ್ನು ಅನುಗ್ರಹಿಸು; ನಿನ್ನ ಮನಸು, ನಿನ್ನಸೊಗಸು, ನಿನ್ನ ರೀತಿ ಎಲ್ಲವೂ ವಿಶಿಷ್ಟ" ಇಲ್ಲಿ ಅತಿಲಾವಣ್ಯರಾಮ ಎಂದಿರುವುದು ವಾಲ್ಮೀಕಿಯ 'ಅತೀವ ಪ್ರಿಯದರ್ಶನಮ್' ಎಂಬ ಮಾತಿನಂತಿದೆ. ಹಾಗೆಯೇ ಶ್ರೀರಾಮನ ಮನ ಸೆಳೆಯುವ ಸೌಂದರ್ಯವನ್ನು ನೋಡಲು ಬ್ರಹ್ಮನೇ ಆದಿಯಾಗಿ ಎಲ್ಲಾ ದೇವತೆಗಳೂ ತಮಗೆ ತಾವಾಗಿಯೇ ಪಕ್ಷಿಗಳು, ಪ್ರಾಣಿಗಳು, ವಾನರ ಗಳ ರೂಪದಲ್ಲಿ ಧರೆಗೆ ಬಂದರು. (ಮೋಹನ ರಾಮ ಎಂಬ ಈ ಕೃತಿಯ ರಾಗದ ಹೆಸರೂ ಮೋಹನ ಎಂಬುದು ಗಮನಾರ್ಹ). ಆಂಜನೇಯನು ಶ್ರೀರಾಮನ ರೇಖೆಗಳು ಮತ್ತು ಸಾಮುದ್ರಿಕ ಲಕ್ಷಣಗಳನ್ನು ಸೀತೆಗೆ ವಿವರಿಸಿದಂತೆ (ಸುಂದರ ಕಾಂಡ) ತ್ಯಾಗರಾಜರೂ ಸಹ ಶ್ರೀ ರಾಮನ ಲಕ್ಷಣಗಳನ್ನು ವಿವರಿಸುವುದರಲ್ಲಿ ಆನಂದ ಪಟ್ಟಿದ್ದಾರೆ. (ಶ್ರೀರಾಮ ದಾಸದಾಸೋಹಂ– ಧನ್ಯಾಸಿ). ಸೀತೆಗೆ ಆ ಲಕ್ಷಣಗಳನ್ನು ಕೇಳಿ ಎಷ್ಟು ಆನಂದವಾಯಿತೋ. ಹಾಗೆಯೇ ತ್ಯಾಗರಾಜರಿಗೂ ಆನಂದ. ಕೇಳಿದ ಮಾತ್ರಕ್ಕೆ ಆನಂದ ಉಂಟಾಗು ವಂತಹ ಅವನ ಸೌಂದರ್ಯವನ್ನು ವರ್ಣಿಸುತ್ತಾ ತಮ್ಮ ಹಲವು ಕೃತಿಗಳಲ್ಲಿ ಅವನನ್ನು ಶೃಂಗಾರ ರಾಮ, ಶೃಂಗಾರಜಲಧೇ, ಶೃಂಗಾರ ಶೇಖರ ಇತ್ಯಾದಿ ಹೇಳಿರುವುದು ಆಶ್ಚರ್ಯವೇನಲ್ಲ. ಏಕೆಂದರೆ ಶ್ರೀರಾಮನ ಸೌಂದರ್ಯವು ಪ್ರತಿ ಯೊಬ್ಬರ ಇಂದ್ರಿಯಗಳಿಗೆ ದಿವ್ಯಾನಂದ ನೀಡು ವಂತಹುದು (ಇಂದ್ರಿಯಮುಲಕಾಹ್ಲಾದಕರ ಮಿಚ್ಚು ರೂಪಮು — ನಮ್ಮಕನೇ ಮೋಸ– ಆಸಾವೇರಿ)ಅದು ಅವರನ್ನು ಮಂತ್ರಮುಗ್ಧರನ್ನಾಗಿ ಮಾಡಿ ಕಟ್ಟಿಹಾಕಿದೆ. (ಕಟ್ಟಜೇಸಿನಾವು ರಾಮ ಬಂದು ಕಟ್ಟುಜೇಸಿನಾವು–ಅಠಾಣ) (ಶೇಷ)

(22ನೇ ಪುಟದಿಂದ)

ಯನ್ನು ನನ್ನ ಪ್ರಾಣಪತಿಗೆ ತಿಳಿಸಿ, ವಾನರ ಸೇನೆಯನ್ನು ಲಂಕೆಯತ್ತ ನಡೆಸು" ಎನ್ನಲು ತನ್ನ ಆತುರಕ್ಕೆ ನಾಚಿದ ಆಂಜನೇಯ ಕ್ಷಮೆ ಬೇಡು ತ್ತಾನೆ. ಮತ್ತೆ ಸೀತೆ ತನ್ನನ್ನು ಆಂಜನೇಯ ಕಂಡಿದ್ದಕ್ಕೆ ಕುರುಹಾಗಿ, ರಾಮನಿಗೆ, ತನಗೆ ಮಾತ್ರ ತಿಳಿದಿದ್ದ ಒಂದು ಘಟನೆಯನ್ನು ಹೇಳು ತ್ತಾಳೆ — ಒಂದು ದಿನ ಚಿತ್ರಕೂಟದಲ್ಲಿ ನಡೆ ದದ್ದನ್ನು ಹೇಳಿ ಅದನ್ನು ಈಚೆಗೆ ಹೇಳಿದ್ದಕ್ಕೆ ಮತ್ತೆ ನಾಚುತ್ತಾಳೆ. ಅದನ್ನು ಕಂಡ, ಆಂಜನೇಯನೂ ಮುಗುಳ್ನಕ್ಕು ಹೊರಡಲು ಸಿದ್ಧನಾಗುತ್ತಿದ್ದಂತೆ, ದೂರದಿಂದ ಭೇರಿ ಶಬ್ದ ಕೇಳುತ್ತದೆ. ಶಬ್ದ ಕೇಳಿದ ಸೀತೆ ಆಂಜನೇಯನಿಗೆ ಪೊದೆಯಲ್ಲಿ ಮರೆ ಯಾಗಲು ತಿಳಿಸುತ್ತಾಳೆ. 'ಪೆಣ್ಗಳ್ಗಿಗುತ್ತರ ಮೆನಲ್ ನಕ್ಷನನಿಲಾತ್ಮಜಂ ಗಾಳಿಯಾಯ್ತು ದಿರಿರ್ದ ಗಾಳಿಯ ಮಗನ ತಳೆದ ಕಪಿಯ ರೂಪಂ' ತ್ರಿಜಟೆ ಸೀತೆಗೆ ತಾನು ಕೇಳಿ ತಿಳಿದದ್ದನ್ನು ತಿಳುಹಲು ಒಳಬರುತ್ತಾಳೆ.

ಆಂಜನೇಯನ ಪರೀಂಗಿತಜ್ಞತೆಯ ಎರಡು ಮುಖಗಳೂ ಇಲ್ಲಿ ಚೆನ್ನಾಗಿ ಬಿಂಬಿತವಾಗಿವೆ. ರಾವಣನ ವಚನಗಳಿಂದ ನೊಂದ ಬಗೆಯ ಸೀತೆ ರಾಮನ ಬಗ್ಗೆ ಪ್ರಶ್ನೆಗಳ ಮಾಲೆಯನ್ನು ಕರೆದಾಗ ಕವಿ ಹೇಳುವ ಮಾತು. 'ಸಂತಸಪುಕ್ಕೆ ಬೇಯು ತಿರ್ದಾಕೆಯಾ ಪ್ರಶ್ನಮಾಲೆಯ ಮಧ್ಯೆ ಹುದುಗಿರ್ದ ಪೆಣ್ಣೆದೆಯ ಸಂದೇಹ ಸೂತ್ರಮಂ ಸಂಭಾವಿಸಿದನಾ ಪರೇಂಗಿತಜ್ಞಂ'. ಎಂತಲೇ ಆಂಜನೇಯ ಹೇಳುವ ಮಾತು – ರಾಮನಿಗೆ ನೀನಲ್ಲದೆ ಇತರೆಲ್ಲವೂ ಮರೆತುಹೋಗಿದೆ. ಆಂಜನೇಯನ ಹೆಗಲ ಮೇರಿನಲ್ಲಿ ರಾಮ ದೇವಾಲಯಕ್ಕೆ ಹೋಗಲು ನಿರಾಕರಿಸುತ್ತ ಪ್ರಮುಖ ಕಾರಣವನ್ನು ಹಿಂದಿಕ್ಕಿ ಅವನ ಲಘು ದೇಹವನ್ನು ಕಾರಣವಾಗಿ ನೀಡಿದ ಆಕೆಯ ಮನ ವನ್ನು ಅರಿಯದೆ ತನ್ನ ಶಕ್ತಿಯನ್ನು ಆಕೆ ಸಂದೇಹಿಸುತ್ತಿರುವಂತೆ ಭಾವಿಸಿದ ಹನುಮನ ಬಗ್ಗೆ ಹೇಳುತ್ತ ಕವಿ 'ನಿಶಿತಮತಿ ಹನುಮನಂಗನೆ ಯಿಂಗಿತವನರಿಯಲಾರದೆಯೆ ತಪ್ಪಿದನೆನಲ್ ಬ್ರಹ್ಮಚರ್ಯಕೆ ಗರಿಮೆಯ್ಯೆನೆ' ಎನ್ನುತ್ತಾರೆ. 'ಬಳೆಯತೊಡಗಿದನಚಲ ಸಂಕಾಶಮದ್ಭುತಂ ಮರುತನೌರಸ ಪುತ್ರನಾಕಾಶಕೆ'. ಆಗ ಸೀತೆ ನಯ ವಾಗಿ ತನ್ನ ಸತೀಧರ್ಮವನ್ನು ತಿಳಿಸಿದಾಗ ಗುರುವಿನ ಉತ್ತೇಜನವಿಲ್ಲದೆ ಉತ್ಸಾಹ ಉಡುಗು ವಂತೆ ತನ್ನ ಮೊದಲಿನ ರೂಪಕ್ಕಿಳಿಯುತ್ತಾನೆ. 'ನಿನ್ನ ಸಂಕಟಮುಂ ಪ್ರಚೋದಿಸಿತ್ತಾ ಧೈರ್ಯ ಮಂತ್ತಾಯಿ' ಎಂದು ಕ್ಷಮೆಕೇಳುತ್ತಾನೆ.

ಹಾಗಾಗಿಯೇ ಆಂಜನೇಯ ಸೀತಾ ಸಂದರ್ಶನ ದಲ್ಲಿ ಓದುಗರಿಗೆ ಹತ್ತಿರವಾಗಿ ಸೀತೆಯ ದುಃಖದಲ್ಲಿ ಪಾಲ್ಗೊಂಡೂ ಶುಭದತ್ತ ನೋಡುವ ಕೃತನಿಶ್ಚಯ ನಾಗಿ ಕಂಡುಬರುತ್ತಾನೆ.

*

(16ನೇ ಪುಟದಿಂದ)

ಎದೆ ಬಡಕೊಂಡು ಅಳಬೇಕಾಗಿತ್ತು. ಅಂಥಾ ಹೊತ್ತಿನಲ್ಲಿ ಸಂತೋಷಪಡುತ್ತೀಯ. ನಿನ್ನ ಅಜ್ಞಾನಕ್ಕೆ ನಾನೇನಂಥಾ ಹೇಳಲಿ? ಹೆತ್ತ ಮಗನಿಗಾಗಿ ಸ್ವಲ್ಪಕೂಡಾ ಯೋಚಿಸದೇ ಮಲಮಗನಿಗೆ ಪಟ್ಟಕಟ್ಟುತ್ತಿದ್ದಾರೆಂದರೆ ಕುಣಿದಾಡುತ್ತಿದ್ದೀಯಲ್ಲಾ. ಹುಚ್ಚೀ, ನಿನಗಿಂತ ನಿರ್ಭಾಗ್ಯರು ಬೇರೆ ಯಾರಿರ್ತಾರೇ?

ದಶರಥ ನಿನಗೆ ಸರಿಯಾದ ಬರೆ ಕೊಟ್ಟಿದ್ದಾನೆ.

ಕೈ : ಮಂಥರೆ, ನನಗೆ ರಾಮನೂ ಒಂದೇ ಭರತನೂ ಒಂದೇ. ಶ್ರೀರಾಮನು ಎಂಥಾ ಒಳ್ಳೆಯವನೆನ್ನುವುದು ನಿನಗೆ ಗೊತ್ತಿಲ್ಲವೇನೇ? ಸ್ವಾರ್ಥ ಅನ್ನೋದೇ ಅವನಿಗೆ ತಿಳಿಯದು. ತಮ್ಮಂದಿರನ್ನು ತನ್ನ ಸರಿಸಮಾನಾಗಿ ನೋಡಿಕೊಳ್ಳುತ್ತಾನೆ. ಆಕಾಶ ಮುರಿದು ಬಿದ್ದರೂ ಅವನ ಬಾಯಿಂದ ಕೆಟ್ಟಮಾತು ಬರುವುದಿಲ್ಲ. ಪುಣ್ಯಾತ್ಮ, ಪರಿಶುದ್ಧಾತ್ಮ, ಸುರಕ್ಷಿತನಾದ ಆ ರಾಮನು ರಾಜನಾಗುವುದು ಈ ಕೋಸಲ ದೇಶ ಮಾಡಿಕೊಂಡ ಪುಣ್ಯವೇ ಪುಣ್ಯ.

ಮಂ : ಹೌದೌದು! ಚತುಸ್ಸಮುದ್ರ ಮುದ್ರಿತ ಧರಾಮಂಡಲೇಶ್ವರಿ ಆದ ಕೌಸಲ್ಯಾದೇವಿಗೆ ಜೀತದಾಳಾಗಿ ಹೊಸ ಕೆಲಸ ಸಂಪಾದಿಸಿಕೊಂಡೆ ನೋಡು, ನಿನ್ನ ಅದೃಷ್ಟ ಏನು ಕಡಿಮೆನಾ! ಹೋಗಲಿ ಇದೆಲ್ಲಾ ನನಗೇತಕ್ಕೆ? ಯಾರು ರಾಜರಾದರೇನು ಯಾರು ಬಿಟ್ಟರೇನು? ನಾನೇನು ರಾಣಿ ಆಗೋದಿಲ್ವಲ್ಲಾ....

ಅಲ್ಲೇ ಹುಚ್ಚೀ ನಾನೊಂದು ವಿಷಯ ಹೇಳ್ತಿನಿ ಕೇಳು. ರಾಮನ ತರುವಾಯ ಭರತನಿಗೆ ರಾಜ್ಯಪ್ರಾಪ್ತಿ ಆಗೋ ವಿಷಯ ನಿನಗೆ ಗೊತ್ತಿಲ್ಲವೇನೇ ಕೈಕೇಯಿ? ರಾಜರು ಎಂಥವರೆನ್ನುವುದು ನಿನಗೆ ಬೇರೆ ಹೇಳಬೇಕೆ? ರಾಮ ದೊಡ್ಡ ರಾಜಕೀಯವೇತ್ತ. ಅವನ ಸಮಯಸ್ಫೂರ್ತಿ ಅವನ ವಶೀಕರಣ ಶಕ್ತಿ ಎಷ್ಟೊಂತ ಹೇಳಲಿಕ್ಕಾಗದು, ವಿಷಯ ಸ್ಪಷ್ಟವಾಗಿದೆ. ಇದಕ್ಕಿಂತ ಬಿಡಿಸಿ ನಾನೇನು ಹೇಳಲಾರೆ

ಕೈ : ಮಂಥರೆ, ನಿನ್ನ ಭಾವನೆ ಅವಗಾಹನೆಯಾಗಿದೆ. ರಾಮನು ಪಟ್ಟಾಭಿಷಿಕ್ತನಾಗುವುದು ನಿನಗೆ ಇಷ್ಟವಿಲ್ಲಾ. ಆ ರಾಮನು ಎಂಥವನೇ. ಆ ರಾಮನು ಭರತನಿಗೆ ಅಪಾಯ ತಂದೊಡ್ಡುವಂಥ ನೀಚನಲ್ಲ. ಆದರೆ ರಾಜ್ಯ ಜ್ಯೇಷ್ಠಾನುಗುತವಾಗಿರುವುದು ಧರ್ಮ. ರಾಜನೀತಿಜ್ಞನಾದ ರಾಮನು ನೂರು ವರ್ಷ ರಾಜ್ಯವಾಳಲಿ, ತದನಂತರವೇ ಭರತ ರಾಜನಾಗಲಿ, ಅವಸರವೇಕೆ?

ಮಂ : ಕೈಕೇಯಿ, ನಿನ್ನಂಥ ಮೂರ್ಖ ಹೆಣ್ಣನ್ನು ನಾನೆಲ್ಲೂ ನೋಡಿಲ್ಲ. ಜ್ಯೇಷ್ಠಾನುಗತ ಅಂತ ನೀನೇ ಹೇಳುತ್ತಾ ಇದ್ದಿಯಲ್ಲಾ, ಆ ರಾಮನಿಗೆ ಮಗ ಹುಟ್ಟುವುದಿಲ್ಲವೇ? ಅವನು ರಾಜನಾಗುವುದಿಲ್ಲವೇ? ನಿನ್ನ ಮಗನಿಗೆ ಹೇಗೆ ರಾಜ್ಯ ಪ್ರಾಪ್ತವಾಗುತ್ತದೆ? ತಾಯಿ ಆದವಳು ಪುತ್ರನ ಯೋಗಕ್ಷೇಮವನ್ನು ಹೀಗೇನೆ ನೋಡುವುದು? ಕೈಕೇಯಿ, ನನ್ನ ತಾಪತ್ರಯ ನಿನಗಾಗಿ ಅಲ್ಲ, ನಾನು ಕೈಯಾರ ಬೆಳೆಸಿದ ಆ ಭರತನಿಗಾಗಿ. ಅಪ್ಪಾ... ಭರತಾ... ಎಲ್ಲಿದ್ದಿಯೋ ತಂದೆ ಮತ್ತೆ ಈ ಕೋಸಲದೇಶಕ್ಕೆ ಕಾಲಿಡಬೇಡ. ಜೀವದಿಂದಿದ್ದರೆ ಸುಖಗಳನ್ನು ಕಾಣಬಹುದು, ನಿನ್ನ ಸೋದರ ಮಾವನ ಮನೆಯಲ್ಲಿ ನಿನ್ನ ಶೇಷ ಕಳೆ.

ಅಮ್ಮಾ ಕೈಕೇಯಿ, ರಾಮ ರಾಜನೀತಿಜ್ಞ ಅಂತ ನೀನೇ ಅಲ್ವೆ ಹೇಳಿದ್ದು. ಇನ್ನು ನಿನ್ನ ಮಗನಿಗೆ ಎಳ್ಳು ನೀರು ಬಿಟ್ಟುಬಿಡು. ಭರತ ನಿರ್ದೋಷಿ ಆದರೂ ರಾಜ್ಯಕ್ಕೆ ಅವನೇ ಹತ್ತಿರದವನು. ಅವನನ್ನು ಈ ರಾಮ ಜೀವದಿಂದ ಉಳಿಸುತ್ತಾನೆಯೆ?

ಕೈ : ಮಂಥರೆ ನೀನೆಷ್ಟೇ ಹೇಳು. ಆ ರಾಮನನ್ನು ಅನುಮಾನಿಸಲು ನನ್ನಿಂದ ಸಾಧ್ಯವಾಗುತ್ತಿಲ್ಲವೆ. ನನ್ನ ಮನ ಒಪ್ಪುತ್ತಿಲ್ಲ.

ಮಂ : ಹೌದಮ್ಮಾ ಇದ್ದ ಮಾತೆಂದರೆ ಕೆಂಡದಷ್ಟು ಕೋಪ ಬರುತ್ತೆ ಅಂತ ಸುಮ್ಮನೇ ಹೇಳಿದ್ದಾರಾ! ಆದರೂ ರಾಜ ರಾಮನಾದರೇನು, ಇನ್ನಾರಾದರೇನು? ಕೂಲಿ ಕೆಲಸ ಮಾಡೋಳು ನಾನು. ನನ್ನ ಕೂಲಿ ಕೆಲಸ ನನಗೆ ಬಿಟ್ಟಿದ್ದಲ್ಲ. ರಾಜ್ಯವಾಳಲು ಊರುಗಳು ಬೇಕಾಗಲಿ ಭಿಕ್ಷೆ ಬೇಡಲು ಊರುಗಳಿರುವು ಇಲ್ಲವೆ. ರಾಮ ನನಗೆಂದೂ ಕೆಟ್ಟದ್ದು ಮಾಡಿಲ್ಲ ನನಗೇನು ಹೊಟ್ಟೆ ಉರೀನೇ?

ಕೈ : ಯಾಕೆ ಇಷ್ಟು ನಿಷ್ಠೂರದ ಮಾತು ಮಾತಾಡ್ತಿಯಾ ಮಂಥರೆ?

ಮಂ : ಹೌದಮ್ಮಾ ನಿಷ್ಠೂರವೇ. ಒಂದು ಪ್ರಶ್ನೆಗೆ ಸಮಾಧಾನ ಹೇಳು ನಿನಗಂಡ ನಿನ್ನೊಂದಿಗೆ ಹೇಗೆ ಇರ್ತಾನೆ?

ಕೈ : ಅವರ ಅನುರಾಗವನ್ನು ನಾನೆಷ್ಟೊಂತ ಹೇಳಲಿ? ಹಗಲು ಇರುಳೂ ನಮ್ಮ ಎರಡೂ ಹೃದಯಗಳು ಒಂದೇ ಆಗಿರುತ್ತವೆ.

ಮಂ : ನನ್ನನ್ನು ಕ್ಷಮಿಸಿಬಿಡಮ್ಮ. ರಾಮನ ಪಟ್ಟಾಭಿಷೇಕದ ವಿಷಯ ನಿನಗೆ ಮೊದಲೇ ತಿಳಿದಿರುವ ವಿಷಯ ನನಗೆ ಗೊತ್ತಿಲ್ಲಾ.

ಕೈ : ಅದೇನೇ! ನೀನು ಈಗ ಹೇಳುವವರೆಗೂ ಆ ಸಮಾಚಾರ ನನಗೆ ತಿಳಿಯದು. ಆದರೆ ನಮ್ಮಿಬ್ಬರ ಆತ್ಮಗಳು ಒಂದೇ ಅಂತ ಹೇಳ್ತಾ ಇದ್ದೇನೆ. ಅಂದಮೇಲೆ ಇಷ್ಟು ಪ್ರಮುಖವಾದ ವಿಷಯವನ್ನು ನನ್ನ ಪತಿ ಒಂದು ಮಾತಾದರೂ ಹೇಳಲಿಲ್ಲವೇಕೆ! ಹೋಗಲಿ ಪಟ್ಟಾಭಿಷೇಕ ಜರುಗಲಿರುವ ವಿಷಯವಾದರನ ಭರತನಿಗೆ ತಿಳಿಸಿರುವನೆ? (ದೀರ್ಘಾಲೋಚನೆಯಲ್ಲಿ)

ಮಂ : ಅಮ್ಮಾ ದಶರಥನಿಗೆ ನಿನ್ನ ಮಗನ ಮೇಲೆ ಇರುವ ಪ್ರೀತಿಯಲ್ಲಾ ಬರಿ ನಾಟಕ. ನನಗೀ ವಿಷಯ ಎಂದೋ ಗೊತ್ತಿತ್ತು. ಮುಹೂರ್ತಕಾಲ ಸಮೀಪಿಸುತ್ತಿದೆ. ಈಗಾದರೂ ನಿಜಸಂಗತಿ ತಿಳಿದುಕೊಂಡಿರುವೆಯಲ್ಲಾ ಅದೇ ಸಂತೋಷ.

ಕೈ : (ಉಸಿರು ಬಿಡುತ್ತಾ) ಭರತನನ್ನು ಕೇಕೆಯ ರಾಜ್ಯಕ್ಕೆ ಕಳಿಸಿರುವುದು... ಈ ವಿಷಯ ನನಗೆ ಇಲ್ಲಿಯವರೆಗೂ ತಿಳಿಸದೇ ಇರುವುದು... ಪಟ್ಟಾಭಿಷೇಕ ಇಂದೇ ಇರುವುದು... ಇವೆಲ್ಲಾ ಮಾಯಾ ವ್ಯೂಹದಲ್ಲಿಯ ಭಾಗಗಳೆಂದು ಈಗ ಸ್ವಲ್ಪ ಸ್ಪಷ್ಟವಾಗುತ್ತಲಿದೆ. ಈ ವಿಷಯ ರಾಜನಿಗೆ ನಿಜವಾಗಲೂ ಸಮಯವಿರಲಿಲ್ಲವೇ? ಎಲ್ಲಾ ಮೋಸ, ವಂಚನೆ ಇದು. ಆ ಕೌಸಲ್ಯೆಯ ಮತ್ಸರದಿಂದ ನಡೆಸಿದ ಜಾಲ ಇರಬೇಕು. ಎಲೆ ಮಂಥರೆ–ಪ್ರತಿಕ್ರಿಯೆ ಏನು ಮಾಡಬೇಕು ತಿಳಿಸು.

ಮಂ : ಅಮ್ಮಾ ಬ್ರಹ್ಮಾಸ್ತ್ರಗಳನ್ನೆಲ್ಲಾ ಕೈಯಲ್ಲಿಟ್ಟುಕೊಂಡು ಬಿದಿರಿನ ಕೊಂಬುಗಳಿಗಾಗಿ ಯಾಕೆ ಹುಡುಕುತ್ತೀಯೆ, ದೇವಾಸುರರ ಯುದ್ಧ ನಡೆದಾಗ ನೀನು ಮಾಡಿದ ಸಹಾಯಕ್ಕೆ ನಿನ್ನ ಪತಿ 'ಎರಡು ವರಗಳನ್ನು ಕೇಳಿಕೋ ಎಂದು' ನಿನ್ನನ್ನು ಕೇಳಿದ್ದನಲ್ಲಾ ಅವುಗಳನ್ನು ಈಗ ಬಳಸಿಕೊಂಡರಾಯ್ತು. ★

(ಸಶೇಷ)

(14ನೇ ಪುಟದಿಂದ)
ನೀನು ರಾಜಕುಮಾರ, ಸತ್ಕುಲಪ್ರಸೂತ, ದಯಾದಾತ, ಸತ್ಯಗುಣ ಸಂಪನ್ನ, ಪರಾಕ್ರಮಶಾಲಿ, ಪ್ರಿಯದರ್ಶನ ಎಂದು ಕೇಳಿದ್ದೇನೆ. ನಾನು ನಿನ್ನ ಸಂಗಡ ಯುದ್ಧ ಮಾಡಲಿಲ್ಲ. ಇನ್ನೊಬ್ಬನ ಸಂಗಡ ಯುದ್ಧ ಮಾಡುತ್ತಿದ್ದಾಗ, ಹಿಂದುಗಡೆಯಿಂದ ನೀನು ನನ್ನನ್ನು ಹೊಡೆಯಬಹುದೇ? ಇದು ಧರ್ಮವೇ? ನಾನು ನಿರಪರಾಧಿ ಅಲ್ಲವೇ? ನೀನು ನನ್ನನ್ನು ದಂಡಿಸಲಿಕ್ಕೆ ಏನು ತಪ್ಪು ಮಾಡಿದೆ?" ಎಂದು ಆಕ್ಷೇಪಿಸಿದನು.

ಶ್ರೀರಾಮನ ಯುಕ್ತಿ ಯುಕ್ತವಾದ ಉತ್ತರದಿಂದ ತೃಪ್ತಿಹೊಂದಿದ ವಾಲಿಯು, ಪಶ್ಚಾತ್ತಾಪದಿಂದ ಕೈ ಮುಗಿದು 'ಶ್ರೀರಾಮಾ! ಪುರುಷೋತ್ತಮಾ! ನೀನು ಹೇಳಿದುದು ಸರಿ. ಧರ್ಮಸೂಕ್ಷ್ಮ ತಿಳಿಯುವುದು ಕಷ್ಟ! ನಾನು ಅಲ್ಪಮತಿ. ಅಜ್ಞಾನದಿಂದ ನಿನ್ನನ್ನು ದೂಷಿಸಿದೆ. ಎಲ್ಲವನ್ನೂ ತಿಳಿದವನು ನೀನು. ಸಾಯುವ ಚಿಂತೆ ನನಗಿಲ್ಲ. ಅಂಗದನನ್ನು ರಕ್ಷಿಸು' ಎಂದು ಹೇಳಿದನು.

ವಾಲಿಯು ಸತ್ತಮೇಲೆ, ಅಂಗದ, ತಾರೆ, ಸುಗ್ರೀವಾದಿಗಳ ದುಃಖಶಮನಕ್ಕಾಗಿ ಶ್ರೀರಾಮನು ಹೀಗೆ ಹೇಳುವನು– 'ನೀವು ಹೀಗೆ ಅಳುತ್ತಿದ್ದರೆ, ವಾಲಿಗೆ ಸದ್ಗತಿ ದೊರೆಯುವುದೇ? ಲೋಕಮರ್ಯಾದೆಯಂತೆ ಅವನ ಕರ್ಮವನ್ನು ಮಾಡಬೇಕು. ಲೋಕದಲ್ಲಿ ಎಲ್ಲಕ್ಕೂ ದೈವವೇ ಕಾರಣ, ಅದನ್ನು ಯಾರೂ ಮೀರಲಾರರು, ಎಲ್ಲ ಕರ್ಮಕ್ಕೂ ದೈವವೇ ಸಾಧನ, ಸಮಸ್ತ ಲೋಕವೂ ದೈವಾಧೀನ, ಯಾರೂ ಸ್ವತಂತ್ರರಲ್ಲ, ಯಾವುದಕ್ಕೂ ಯಾರೂ ಕರ್ತರಲ್ಲ, ಎಲ್ಲಕ್ಕೂ ದೈವವೇ ಆಧಾರ, ದೈವ ಸರ್ವಸ್ವತಂತ್ರ, ದೈವವೇ ಕಾಲಸ್ವರೂಪ, ಎಲ್ಲವೂ ಅದಕ್ಕೆ ಅಧೀನ, ದೈವವೇ ಎಲ್ಲರಿಗೂ ಪರಮಗತಿ, ದೈವವನ್ನು ಯಾರೂ ವಶಪಡಿಸಿಕೊಳ್ಳಲಾರರು, ದೈವಕ್ಕೆ ಗೆಳೆಯ, ದಾಯಾದಿ ಎಂಬ ಬಂಧುತ್ವ ಇಲ್ಲ. ಅವರವರ ಕರ್ಮದಂತೆ ಅವರವರಿಗೆ ಫಲ. ವಾಲಿಯು ತನ್ನ ಕರ್ಮಾನುಸಾರ, ಧರ್ಮಾರ್ಥಕಾಮಗಳನ್ನು ಅನುಭವಿಸಲು ಸ್ವರ್ಗಕ್ಕೆ ಹೋದನು. ಅವನ ಕರ್ಮಾಂತರಗಳನ್ನು ನೀವುಗಳು ಮುಗಿಸಿ."

ಸುಗ್ರೀವನನ್ನು ಕುರಿತು 'ಹೇ! ಸುಗ್ರೀವ ರಾಜಾ! ತಂದೆಯ ಅಪ್ಪಣೆಯಂತೆ ನಾನು ವನವಾಸ ಮಾಡುತ್ತಿದ್ದೇನೆ. ನಗರ ಪ್ರವೇಶ ಮಾಡುವುದಿಲ್ಲ. ವಾನರ ವೀರರೆಲ್ಲರೂ ಸೇರಿ ನಿನಗೆ ಪಟ್ಟಾಭಿಷೇಕ ಮಾಡುವರು. ಈಗ ವರ್ಷಕಾಲ ಪ್ರಾರಂಭವಾಗಿದೆ. ಇದು ಸಂಚಾರಕ್ಕೆ ಈ ಯೋಗ್ಯಕಾಲವಲ್ಲ. ಇದು ಕಳೆಯುವವರೆಗೂ ನೀನು ಕಿಷ್ಕಿಂಧೆಯಲ್ಲಿ ಸುಖವಾಗಿದ್ದು, ಅನಂತರ ಸೀತಾನ್ವೇಷಣ ಪ್ರಯತ್ನ ಮಾಡು. ಅಲ್ಲಿಯವರೆಗೂ ನಾನೂ ಲಕ್ಷ್ಮಣ ಇಬ್ಬರೂ ಈ ಋಷ್ಯಮೂಕ ಪರ್ವತದಲ್ಲಿರುವೆವು' ಎಂದು ಹೇಳಿದನು ಶ್ರೀರಾಮ.

ಅನಂತರ ವಾನರವೀರರಾದ, ಗಜ, ಗವಾಕ್ಷ, ಗಂಧಮಾದನ, ಗವಯ, ಶರಭ, ಮೈಂದ, ನಳ, ಹನುಮಂತ, ಜಾಂಬವಾದಿಗಳು ಸುಗ್ರೀವನನ್ನು ರತ್ನದ ಸಿಂಹಾಸನದಲ್ಲಿ ಕೂರಿಸಿ, ಸಮಸ್ತ ಪುಣ್ಯತೀರ್ಥಗಳಿಂದ ಸುಗ್ರೀವನಿಗೆ ಅಭಿಷೇಕ ಮಾಡಿದರು. ಅಂಗದನಿಗೆ ಯುವರಾಜ ಪಟ್ಟಾಭಿಷೇಕ ಮಾಡಿದರು. ವಾನರರ ಸಂತೋಷಕ್ಕೆ ಪಾರವೇ ಇರಲಿಲ್ಲ. ಎಲ್ಲರೂ ಸುಗ್ರೀವನನ್ನು ಕೊಂಡಾಡಿದರು. ಇಂತಹ ಅಭಿಷೇಕಕ್ಕೆ ಕಾರಣದಿಂದ ರಾಮಲಕ್ಷ್ಮಣರಿಗೆ ಕೃತಜ್ಞತಾ ಪೂರ್ವಕವಂದನೆ ಸಲ್ಲಿಸಿದರು.

ಸಲಿಲೇನ ಸಹಸ್ರಾಕ್ಷಂ
ವಸವೋ ವಾಸವಂ ಯಥಾ
ಅಭಿಷಿಕ್ತೇತು ಸುಗ್ರೀವೇ
ಸರ್ವೇ ವಾನರ ಪುಂಗವಾಃ।
ಅಂಗದೇಚಾಭಿಷಿಕ್ತೇತು
ಸಾನುಕ್ರೋಶಸ್ಲವಂಗಮಾಃ।
ಸಾಧು ಸಾಧ್ವಿತಿ ಸುಗ್ರೀವಂ
ಮಹಾತ್ಮಾನೋಽಭ್ಯಪೂಜಯನ್।
ರಾಮಂ ಚೈವ ಮಹಾತ್ಮಾನಂ
ಲಕ್ಷ್ಮಣಂ ಚ ಪುನಃ ಪುನಃ॥

# ಯುವವಾಣಿ

# ಶ್ರೀರಾಮನ ಜನಪ್ರಿಯತೆಗೊಂದು ಕಾರಣ

ವೇದದಿಂದಾರಂಭಿಸಿ ಗೀತೆಯವರೆಗಿನ ಆರ್ಯಧರ್ಮ ಪ್ರತಿಪಾದನೆಯ ವ್ಯವಹಾರಿಕ ಹಾಗೂ ನಿದರ್ಶನಾತ್ಮಕದ ಜೀವಂತ ರೂಪವನ್ನು ನಾವು ರಾಮನ ಚರಿತ್ರದಲ್ಲಿ ಕಾಣಬಹುದು. ಎಂತಲೇ ಶ್ರೀರಾಮನ ಜೀವನ ಹಿಂಧೂ ಧರ್ಮದ ಮೂರ್ತಿರೂಪ. ಭಾರತೀಯ ಧರ್ಮದ ಜನ್ಮವಿಕಾಸಗಳು ಕುಟುಂಬದಲ್ಲಾಗುತ್ತವೆ. ಕೌಟುಂಬಿಕ ಜೀವನವೇ ಇಂದಿನ ಮಾನವ ಸಮಾಜದ ರೂಪವನ್ನು ನಿರ್ಮಿಸಿದೆ. ಕುಟುಂಬವೇ ಸಾಮಾಜಿಕ ಜೀವನಕ್ಕೆ ತಳಹದಿಯಾದ ಭಾರತೀಯ ದರ್ಶನದ ಪ್ರಯೋಗಶಾಲೆ. ಕುಟುಂಬದಲ್ಲಿ ಭಾರತೀಯ ಬಾಲಕ–ಬಾಲಕಿಯರಿಗೆ ಅನಾಯಾಸವಾಗಿ ದೊರೆಯುವ ಶಿಕ್ಷಣ ಯಾವುದೇ ವಿಶ್ವವಿದ್ಯಾಲಯದಲ್ಲಿ ಸಿಗಲಾರದು. ಕುಟುಂಬ ನಿಜಕ್ಕೂ ಒಂದು ವಿದ್ಯಾಪೀಠ. ಕುಲಧರ್ಮದಿಂದಲೇ ವಿಶ್ವಧರ್ಮ ಹುಟ್ಟುತ್ತದೆ. ಆದ್ದರಿಂದ ಕುಲಧರ್ಮವನ್ನೇ ಸರಿಯಾಗಿ ನಿರ್ವಹಿಸಲಾರದವನು ವಿಶ್ವಕ್ಕೆ ತನ್ನಿಂದಾಗಬೇಕಾದ ಸೇವೆ ಸಲ್ಲಿಸಲಾರ.

ಮನುಷ್ಯ ಏಕನಾದರೂ ಅನೇಕ. ಅವನು ಮಗನೂ ಹೌದು ; ತಂದೆಯೂ ಹೌದು. ಆತ ಪತಿ, ಸೋದರ, ಶಿಷ್ಯ, ಗುರು, ರಾಜ, ಪ್ರಜೆ, ಮಿತ್ರ, ಸ್ವಾಮಿ, ಸೇವಕ ಮೊದಲಾದ ನಾನಾ ರೂಪಗಳಲ್ಲಿ ಸಮಾಜದ ಮುಂದೆ ನಿಲ್ಲುತ್ತಾನೆ. ಇವಲ್ಲದೆ ಶಾರೀರಿಕವಾಗಿ ಶಿಶು, ಯುವಕ, ವೃದ್ಧ, ಸ್ವಸ್ಥ, ಅಸ್ವಸ್ಥ, ಸುಖಿ, ದುಃಖಿ, ಜ್ಯೇಷ್ಠ, ಕನಿಷ್ಠ–ಮೊದಲಾದ ಹಲವು ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಮಾನಸಿಕವಾಗಿಯೂ ಆತ ಒಂದೇ ರೀತಿಯಲ್ಲಿರುವುದಿಲ್ಲ. ಇದಕ್ಕಿಂತಲೂ ಹೆಚ್ಚಿನ ಭೇದ 'ಕಾಲ'ದಿಂದಾಗಿ ಮನುಷ್ಯನ ಜೀವನದಲ್ಲಿ ಉಂಟಾಗುವುದು. ಒಮ್ಮೆ ಆತ ಆಕಾಶದಲ್ಲಿ ಹಾರುತ್ತಿದ್ದರೆ, ಇನ್ನೊಮ್ಮೆ ಅವನಿಗೆ ಪಾತಾಳದಲ್ಲೂ ನೆಲೆ ದೊರೆಯುವುದಿಲ್ಲ. ಒಮ್ಮೆ ರಾಜನಂತೆ ಮೆರೆಯುವವನು ಇನ್ನೊಮ್ಮೆ ಭಿಕ್ಷುಕನಿಗಿಂತಲೂ ಕೀಳ್ಮಟ್ಟಕ್ಕಿಳಿಯುತ್ತಾನೆ. ಈ ಏರಿಳಿತಗಳು ಎಲ್ಲರ ಬದುಕಿನಲ್ಲೂ ಒದಗುತ್ತವೆ. ಆಗ ಮನುಷ್ಯನ ವ್ಯವಹಾರ ಹೇಗಿರಬೇಕು ? – ಎಂಬುದರ ಜೀವಂತ ಚಿತ್ರಣ ರಾಮಚರಿತ್ರದಲ್ಲಿದೆ. ಎಂತಲೇ ವಾಲ್ಮೀಕಿ ರಾಮಾಯಣ ವಿಶ್ವಸಾಹಿತ್ಯದ ಅಮರಗ್ರಂಥ ಎನಿಸಿದೆ.

"ನೀನು ಮಗನಾದರೆ ರಾಮನಂತೆ ತಂದೆತಾಯಿಗಳ ಆಜ್ಞೆಯನ್ನು ಪರಿಪಾಲಿಸು; ಸೋದರನಾದರೆ ರಾಮನಂತೆಯೇ ಆಗು, ಎಂದಿಗೂ ಸೋದರನ ಮೇಲೆ ಅವಿಶ್ವಾಸ ಇಡಬೇಡ. ಭರತನಂತೆ ಅಣ್ಣನನ್ನು ತಂದೆಯೆಂದೇ ಭಾವಿಸು.''

ಅಣ್ಣ ತಂಗಿ, ತಂದೆ ತಾಯಿ, ಬಂಧು ಬಾಂಧವರು – ಇವರೆಲ್ಲರ ಸಮುದಾಯವೇ ಕುಟುಂಬ. ಎಲ್ಲರ ಬಗೆಗೂ ಮನುಷ್ಯನ ಕರ್ತವ್ಯಗಳಿವೆ. ಅವನ್ನು ಪಾಲಿಸುವ ವೇಳೆ ಇತರರ ಕರ್ತವ್ಯಪಾಲನೆಗೆ ಅಡ್ಡಿ ಆತಂಕ ಒದಗದಂತೆ ಎಚ್ಚರವಹಿಸಬೇಕು. ಬದುಕಿನ ಈ ಸಮಭಾವನೆಗೇ ಕುಟುಂಬ–ಜೀವನ. ಭಗವಾನ್ ಶ್ರೀಕೃಷ್ಣ 'ಸಮತ್ವಂ ಯೋಗ ಉಚ್ಯತೇ'– ಎಂದು ಈ ಸತ್ಯವನ್ನೇ ಪ್ರತಿಪಾದಿಸಿದ್ದಾನೆ. ಈ ಯೋಗದ ನೈಜಶಿಕ್ಷಣ ಕುಟುಂಬದಲ್ಲೇ ದೊರೆಯುತ್ತದೆ. ಇದೂ ಕೌಟುಂಬಿಕ ಜೀವನದಲ್ಲೇ ಸಾಧ್ಯ. ಕೌಟುಂಬಿಕ ಜೀವನ ಹಾಗೂ ಗ್ರಾಮಸಂಸ್ಥೆಗಳನ್ನು ಕೊನೆಗೊಳಿಸಿದರೆ ಭಾರತೀಯ ಧರ್ಮವೇ ಮರೆಯಾಗುವುದು.

ದುರ್ದೈವದಿಂದ ಇಂದು ಕೌಟುಂಬಿಕ ಜೀವನ ಗಂಡಾಂತರದಲ್ಲಿದೆ. ವೈಯಕ್ತಿಕ ಸ್ವಾತಂತ್ರ್ಯದ ಹೆಸರಿನಲ್ಲಿ ಉಚ್ಛೃಂಖಲತೆ ತಾಂಡವವಾಡುತ್ತಿದೆ. ಯುವವರ್ಗದಲ್ಲಿ ಅಸ್ಥಿರತೆ ಮಿತಿಮೀರಿ ಹೆಚ್ಚಿದೆ. ಇವೆರಡೂ ಕೌಟುಂಬಿಕ ಜೀವನದ ಭಯಂಕರ ವೈರಿಗಳು. ಇವಕ್ಕಿಂತಲೂ ಮಿಗಿಲಾಗಿ ನಮ್ಮ ದೇಶದಲ್ಲಿ ಹರಿಯುತ್ತಿರುವ ಪಾಶ್ಚಾತ್ಯ ದಾರ್ಶನಿಕ ಧಾರೆಯಿಂದಾಗಿ – ಕುಟುಂಬ ಮನುಷ್ಯಸಮಾಜದ ಉನ್ನತಿಗೆ ಬಾಧಕ– ಎಂಬ ಮನೋವೃತ್ತಿ ಬೆಳೆಯತೊಡಗಿದೆ. ಇಂಥ ಜನ ವಿವಾಹಪದ್ಧತಿಯೂ ಹೇಯವೆಂದು ಹೇಳತೊಡಗಿದ್ದಾರೆ. ಸ್ವಚ್ಛಂದ ಪ್ರೇಮದ ಪ್ರತಿಪಾದಕರಾದ ಇಂತಹವರು ನೇತಾರರಾದರೆ ಮಾನವಸಮಾಜ ರಸಾತಲಕ್ಕಿಳಿಯುವುದು. ಇಂದಿನ ನಮ್ಮ ಪ್ರಗತಿಗೆ ಕುಟುಂಬ ಜೀವನವೇ ಮುಖ್ಯಕಾರಣವೆಂದು ನಿರ್ವಿವಾದ. ಕುಟುಂಬವೇ ಸಮಾಜದ ಮೂಲ. ಕುಟುಂಬಕ್ಕಾಗಿಯೇ ಶ್ರೀರಾಮ ರಾಜ್ಯದ ಬದಲು ವನವಾಸವನ್ನಂಗೀಕರಿಸಿದ. ಶ್ರೀರಾಮ ಇಂದು ಹಿಂದುಗಳ ಹೃದಯದಲ್ಲಿ ನೆಲೆನಿಲ್ಲಲೂ ಇದೂ ಒಂದು ಮುಖ್ಯಕಾರಣ.

(ಸಂಗ್ರಹ)

★

ಶ್ರೀ ಬಿ. ಸುಬ್ರಾಯ ಅಡಿಗ

ವಿಶುದ್ಧಂ ಪರಂ ಸಚ್ಚಿದಾನಂದರೂಪಂ
ಗುಣಾಧಾರ ಮಾಧಾರಹೀನಂ ವರೇಣ್ಯಮ್ ॥
ಮಹಾಂತಂ ವಿಭಾಂತಂ ಗುಹಾಂತಂ ಗುಣಾಂತಂ
ಸುಖಾಂತಂ ಸ್ವಯಂ ಧಾಮ ರಾಮಂ ಪ್ರಪದ್ಯೇ ॥

## ಪುಸ್ತಕವಿಮರ್ಶೆ

### ಮೂವರು ಶ್ರೀವೈಷ್ಣವ ಸಂತರು :

ಲೇಖಕಿ: ಬಿ.ಎಸ್. ವಿಜಯಮ್ಮ

ಪುಟಗಳು: 95.

ಬೆಲೆ: ರೂ. 7-00

ಪ್ರಕಾಶಕರು: ಪುಲಿಕೇಶಿ ಪ್ರಕಾಶನ, ಪುಲಿಕೇಶಿರಸ್ತೆ, ಯಶವಂತಪುರ.

ಬೆಂಗಳೂರು—22.

ಭಾರತೀಯ ಸಂತ ಶ್ರೇಷ್ಠರಲ್ಲಿ ಶ್ರೀವೈಷ್ಣವ ಸಂತರಾದ ಮಧುರಕವಿ,ತಿರುವರಂಗತ್ತಮುದನಾರ್, ಮತ್ತು ನಾಥಮುನಿ ಇವರುಗಳು ಉಲ್ಲೇಖಾರ್ಹರು.

ಮಧುರ ಕವಿಗಳು "ಗುರುದೇವೋ ಮಹೇಶ್ವರಃ" ಎಂದು ಹಾಡಿದವರು. ಅವರು ನಮ್ಮಾಳ್ವಾರ್‌ರವರ ಜೀವನದಲ್ಲಿ ಹಾಸು ಹೊಕ್ಕಾಗಿದ್ದರು. ವಿಷ್ಣುಭಕ್ತರೇ ಆಗಿದ್ದ ಮಧುರ ಕವಿಗಳು ಮಾತೆಯ ಗರ್ಭದಲ್ಲಿರುವಾಗಲೇ ಪರಮಪದ ತತ್ತ್ವವನ್ನು ಅರಿತಿದ್ದವರು. ಭಗವಂತನು ಅವರಿಗೆ ಗರ್ಭದಲ್ಲಿಯೇ ಉಪದೇಶ ಮಾಡಿದ್ದನು.

ಇವರು ತೀರ್ಥ ಯಾತ್ರೆ ಮಾಡುತ್ತಾ ಇದ್ದಾಗ ಅಯೋಧ್ಯೆಯಲ್ಲಿ ಇವರಿಗೆ ದೈವ ಸಾಕ್ಷಾತ್ಕಾರವಾಯಿತು. ಇವರಿಗೆ ಗುರುವಿನ ದರ್ಶನವಾದದ್ದು ಒಂದು ದೈವೀಕ ಸಂಯೋಗ. ಸಾಕ್ಷಾತ್ ದೈವಸ್ವರೂಪರಾದ ಶಠಗೋಪರು ಮಧುರ ಕವಿಗಳಿಗೆ ಗುರುಗಳಾದರು.

ಉಪನಿಷತ್ತುಗಳಲ್ಲಿ ಹೇಳಿರುವ ಕರ್ಮ ಮತ್ತು ಬ್ರಹ್ಮ— ಈ ತತ್ತ್ವಗಳನ್ನು ಗುರುಮುಖೇನ ಮಧುರ ಕವಿಗಳು ಅರಿತರು. ಮಧುರ ಕವಿಗಳು ನಮ್ಮಾಳ್ವಾರ್ ಅವರ ಕೃತಿಗಳನ್ನು ಸಂಗ್ರಹಿಸಿ ಶುದ್ಧ ಪ್ರತಿ ಮಾಡಿ ಇಟ್ಟರು. ಇದು ಹಿಂದು ಊಹೆಯಾದರೂ ವಾಸ್ತವ ಸಂಗತಿ ಎಂಬುದು ಆ ನಂತರ ತಿಳಿದು ಬಂದಿದೆ.

ಮತ್ತೊಬ್ಬರು ತಿರುವರಂಗತ್ತಮುದನಾರ್. ಈ ಮಹಾ ವ್ಯಕ್ತಿಯ ಜೀವನ ರಾಮಾನುಜರ ಸಮಕಾಲೀನ ಜೀವನವಾಗಿದ್ದಿತು. ಇವರು ರಾಮಾನುಜರ ಶಿಷ್ಯ ಪರಂಪರೆಯಲ್ಲಿ ಪ್ರಮುಖ ಸ್ಥಾನ ಪಡೆದು ಶರಣಾಗತಿ, ಪ್ರಪತ್ತಿಗಳನ್ನು ಜೀವನದಲ್ಲಿ ಅಳವಡಿಸಿಕೊಂಡವರು. ವಿಶಿಷ್ಟಾದ್ವೈತದ ಪರಮ ಕಾರಣಿಕ ತತ್ತ್ವವಾದ 'ಓಂ ನಮೋ ನಾರಾಯಣಾಯ'ಎಂಬ ಮೂಲ ಮಂತ್ರಕ್ಕೆ ಪುನಗು, ಜವ್ವಾಜಿ, ಕಸ್ತೂರಿಗಳನ್ನು ಎರೆದ ಮಹಾತ್ಮರಿವರು. ಇವರ ಕೊಡುಗೆ ವಿಶಿಷ್ಟಾದ್ವೈತಕ್ಕೆ ಅಮರವಾದುದು. ಇವರು ಶರಣಾಗತಿ ತತ್ತ್ವಕ್ಕೆ ಪ್ರಧಾನ ಇಂಬುಗೊಟ್ಟ ಶ್ರೀ ವೈಷ್ಣವ ಸಂತರು. ಇವರು ರಾಮಾನುಜರನ್ನು ಶ್ರೀಮನ್ನಾರಾಯಣನಿಗೆ ಹೋಲಿಸಿ ಹಾಡಿದ್ದಾರೆ.

ಈ ಸಂಗ್ರಹದಲ್ಲಿ ಮೂರನೆಯವರಾದ ನಾಥಮುನಿಗಳ ಜೀವನ ಚರಿತ್ರೆ ಅನುಕರಣಾರ್ಹವಾದುದು. ತಮಿಳುನಾಡಿನ ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿ ಇವರ ಜನ್ಮವಾಯಿತು. ವೇದ ವೇದಾಂಗಗಳ ಸಾಕಾರ ರೂಪರಾಗಿದ್ದ ಈಶ್ವರಭಟ್ಟರ ಪುತ್ರರು ಇವರು. ಲೇಖಿಕೆ ಇವರ ಕಾಲವನ್ನು ಕ್ರಿ. ಶ. 823 ರಿಂದ 924 ಎಂದು ಹೇಳಿದ್ದಾರೆ. ಇವರ ತಾಯಿ ತಾಮರೆಯಾಳ್. ಆಕೆ ಸಾಮವೇದವನ್ನು ಹೃದಯಂಬುಗುವಂತೆ ಹಾಡುತ್ತಿದ್ದ ಕೋಗಿಲೆ. ಇವರಿಗೂ ಸಹ ತಾಯಿಯ ಗರ್ಭದಲ್ಲಿದ್ದಾಗಲೇ ಭಗವಂತನಿಂದ ಉಪದೇಶವಾಯಿತು. ಎಂದೇ ಇವರು ಶ್ರೀಮನ್ನಾರಾಯಣನ ಪರಮ ಭಕ್ತರಾದರು. ಇತರ ಶ್ರೀ ವೈಷ್ಣವ ಸಂತರಂತೆ ನಾಥಮುನಿಗಳೂ ಸಹ ಭಾರತದಾದ್ಯಂತ ಸಂಚರಿಸಿ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿ ಜೀವನವನ್ನು ಸಾರ್ಥಕ ಮಾಡಿಕೊಂಡರು. ತೀರ್ಥಯಾತ್ರೆಯಿಂದ ಹಿಂದಿರುಗಿದ ಮೇಲೆ ಅವರು ಆನಂದ ಪರವಶರಾಗಿ ಗ್ರಂಥ ರಚನೆಗಳಲ್ಲಿ ತೊಡಗಿದರು. ಇವರ ಮೂರು ಕೃತಿಗಳು ಪ್ರಖ್ಯಾತವಾಗಿವೆ. ಅವೆಂದರೆ ನ್ಯಾಯತತ್ತ್ವ, ಯೋಗಿರಹಸ್ಯ ಮತ್ತು ಪುರುಷ ನಿರ್ಣಯ—ಎಂಬುವು.

ಶ್ರೀಮತಿ ವಿಜಯಮ್ಮನವರು ನಮಗೆ ಈ ಮೂವರ ಜೀವನವನ್ನು ಕನ್ನಡದಲ್ಲಿ ವಿವರಿಸುವ ಕೃತಿಯನ್ನು ನೀಡಿ ಧನ್ಯರಾಗಿದ್ದಾರೆ.

—ಕುಮುದಪ್ರಿಯ

# ಒಂದು ಉತ್ತಮ ಕೃತಿ

### ಪುಸ್ತಕ ವಿಮರ್ಶೆ

ಸಪ್ತಗಿರಿಯಲ್ಲಿ ಪುಸ್ತಕ ವಿಮರ್ಶೆಗಾಗಿ ಕೃತಿಗಳನ್ನು ಕಳುಹಿಸುವವರು ಪುಸ್ತಕದ ಎರಡು ಪ್ರತಿಗಳನ್ನು ಕಳುಹಿಸಬೇಕೆಂದು ವಿನಂತಿ.

ಪುಸ್ತಕಗಳನ್ನು ಕಳುಹಿಸಲು ವಿಳಾಸ :

ಸಂಪಾದಕರು,

ಸಪ್ತಗಿರಿ

ತಿರುಪತಿ.

ಗೃಹಲಕ್ಷ್ಮಿ

# ಲಕ್ಷ್ಮೀಶ ಕಂಡ ಸೀತಾದೇವಿ

**ಶ್ರೀಮತಿ ಎ. ಎಸ್. ಪಂಕಜ**

ಲಕ್ಷ್ಮೀಶಕವಿ ದೇವಾಯತ್ತವಾದ ಕವಿತಾ ಪ್ರೌಢಿಮೆಯನ್ನು ಪಡೆದಿದ್ದ ವರಕವಿ. ಕರ್ನಾಟಕ ಮಾತೆಯ ಕಂಠಹಾರದಲ್ಲಿ ಮಿನುಗುವ ದಿವ್ಯಮಣಿಗಳಲ್ಲಿ ಅವನ ಗ್ರಂಥ ಜೈಮಿನಿ ಭಾರತವೂ ಒಂದೆನ್ನಲು ಅಡ್ಡಿಯಿಲ್ಲ. ಪಂಡಿತರೂ, ಪಾಮರರೂ, ಉಭಯತ್ರರೂ ಪ್ರೀತಿಸಿ ತಲೆದೂಗಿದ ಗ್ರಂಥಗಳೆಂದರೆ ಲಕ್ಷ್ಮೀಶ ಕುಮಾರವ್ಯಾಸರ ಗ್ರಂಥಗಳೇ; ಆದಕಾರಣ ಲಕ್ಷ್ಮೀಶನೂ, ಕುಮಾರ ವ್ಯಾಸನೂ ಉದ್ದಾಮಕವಿಗಳಾಗಿರುವುದರ ಜೊತೆಗೆ ಭಾಗ್ಯಶಾಲಿಗಳಾದ ಪುಣ್ಯಪುರುಷರೂ ಅಹುದು. ಹಳ್ಳಿಗಳ ಹುಲ್ಲು ಗುಡಿಸಿಲುಗಳಿಂದ ಹಿಡಿದು ಪಟ್ಟಣಗಳ ಸೌಧಮಾಲೆಗಳವರೆಗೂ ಸರ್ವಾದರಣೀಯವಾಗಿ, ಸಾರ್ವತ್ರಿಕವಾಗಿ ಸನ್ಮಾನವನ್ನು ಪಡೆದು, ಪಡೆಯುತ್ತಲೂ ಇರುವ ಉದ್ಗ್ರಂಥಗಳನ್ನು ಬರೆದ ಕವಿಗಳಾದ ಈ ಈರ್ವರಿಗೂ, ಸಾರಸ್ವತ ಸಾಮ್ರಾಜ್ಯದಲ್ಲಿ ಚಿರಂಜೀವಿ ಪಟ್ಟವು ಸಿದ್ಧವಾಗಿಯೇ ಇದೆ.

ಲಕ್ಷ್ಮೀಶನ ಕಾವ್ಯದಲ್ಲಿ ಸ್ತ್ರೀ ಪಾತ್ರಗಳು ಪುರುಷ ಪಾತ್ರಗಳಿಗಿಂತ ವಿಶೇಷವಾಗಿ ಮನೋಹರವಾಗಿವೆ. ಕವಿಯು ಪಾತ್ರರಚನೆಯಲ್ಲಿ ವಿಶೇಷ ಕೌಶಲವನ್ನು ತೋರಿಸಿದ್ದಾನೆ. ಗಂಡನ ಮಾತುಗಳಿಗೆಲ್ಲಾ ತಪ್ಪದೆ ಪ್ರತಿ ಹೇಳುತ್ತಿದ್ದ ಚಂಡಿಯ ವಕ್ರತೆಯಿಂದ ಹಿಡಿದು, ಪತಿಯೇ ಪ್ರತ್ಯಕ್ಷ ದೈವವೆಂದು ನಂಬಿದ ಸೀತಾದೇವಿಯ ಋಜುತೆಯವರೆಗೂ ಬಗೆ ಬಗೆಯ ಗುಣ ಸ್ವಭಾವ ವೈವಿಧ್ಯಗಳಿಂದ ಕೂಡಿರುವ ಸ್ತ್ರೀಯರನ್ನು ಈ ಕಾವ್ಯದಲ್ಲಿ ಕಾಣಬಹುದಾಗಿದೆ. ಅನೇಕ ಮಾದರಿಯ ಸ್ತ್ರೀಯರನ್ನು ಕವಿಯು ವರ್ಣಿಸಿ ನಮ್ಮೆದುರಿಗೆ ನಿಲ್ಲಿಸಿದ್ದಾನೆ. ಶೃಂಗಾರ ರಸಿಕೆಯಾದ ಪ್ರಭಾವತಿ, ಜಲವಾದಿನಿಯಾದ ಜ್ವಾಲೆ, ವಿಪರೀತ ಪ್ರಕೃತಿಯ ಚಂಡಿ, ಪ್ರಣಯ ಚತುರೆಯಾದ ವಿಷಯೆ – ಇವರನ್ನೂ ಲಕ್ಷ್ಮೀಶನು ತನ್ನ ಕಥಾ ಮಂದಿರದಲ್ಲಿ ಮೂರ್ತಿಗಳನ್ನಾಗಿ ಕೆತ್ತಿ ನಿಲ್ಲಿಸಿದ್ದಾನೆ. 'ಪ್ರೇರಣೆ ಮೂಲದಿಂದ, ಆದರೆ ಪ್ರತಿಕೃತಿ ಅವನದು'. ಹೆಣ್ಣು ಪಾತ್ರಗಳಲ್ಲಿ ಉತ್ತರ ರಾಮಾಯಣದ ಭಾಗದಲ್ಲಿ ಕರುಣಮೂರ್ತಿಯಾಗಿ ಮೆರೆದ ಸೀತಾದೇವಿ ಪ್ರಮುಖಳಾಗಿದ್ದಾಳೆ. ಅವಳ ಆದರ್ಶ ರಾಮನಿಷ್ಠೆಯನ್ನು ಸಹನಶೀಲತೆಯನ್ನೂ ಚಿತ್ರಿಸುವುದರ ಜೊತೆಗೆ ಅನ್ಯಾಯವಾದ ಪರಿತ್ಯಾಗದ ಬಗ್ಗೆ ಪ್ರತಿಭಟನೆಯನ್ನೂ ಕವಿ ಚಿತ್ರಿಸಿದ್ದಾನೆ. ಲಕ್ಷ್ಮಣನಿಂದ ಪರಿತ್ಯಾಗದ ಕಾರಣವನ್ನು ತಿಳಿದೊಡನೆ ಅವಳಲ್ಲಿ ಉಂಟಾದ ಪ್ರತಿಕ್ರಿಯೆಗಳನ್ನು ಲಕ್ಷ್ಮೀಶನು ಯಥಾವತ್ತಾಗಿ ನಿರೂಪಿಸಿ ತನ್ನ ಪಾತ್ರ ಪ್ರಜ್ಞೆಯ ಮೇಲ್ಮಟ್ಟವನ್ನು ಮೆರೆದಿದ್ದಾನೆ.



ಲಕ್ಷ್ಮೀಶ ಕವಿಯು ಚಿತ್ರಿಸಿರುವ ಸೀತಾದೇವಿಯ ಪಾತ್ರವೂ ಮನೋಜ್ಞವಾಗಿದೆ.

ಸೀತಾದೇವಿಯನ್ನು ಮೀರಿಸಿರುವ ಪಾತ್ರವು ಜಗತ್ತಿನ ಸಾಹಿತ್ಯ ಸೃಷ್ಟಿಯಲ್ಲೇ ಮತ್ತೊಂದಿಲ್ಲ. ವಾಲ್ಮೀಕಿ ಮಹರ್ಷಿಯ ಯಶಸ್ಸು ಶಾಶ್ವತವಾಗಿರಲು ಅದೊಂದು ಪಾತ್ರವೇ ಸಾಕು. ಶ್ರೀರಾಮನಂತಹವರು ಜಗತ್ತಿನಲ್ಲಿ ನೂರಾರು ಮಂದಿ ಅವತರಿಸುವುದು ಒಂದು ವೇಳೆ ಸಾಧ್ಯವಾದರೂ ಆಗಬಹುದೆಂದೂ, ಆದರೆ ಜಗತ್ತು ಸೀತಾದೇವಿಯಂತಹ ಸ್ತ್ರೀ ಜಾತಿಯ ಚೂಡಾರತ್ನವನ್ನು ಮತ್ತೊಮ್ಮೆ ಕಾಣಲಾರದೆಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಟ್ಟಿರುವುದು ಅಕ್ಷರಶಃ ನಿಜ. ಹಿಟ್ಟಿನಲ್ಲಿ ವಾಲ್ಮೀಕಿ ಮಹರ್ಷಿಯು ಹಾಕಿಕೊಟ್ಟಿರುವ ಎಲ್ಲೆಕಟ್ಟುಗಳಿಗೆ ಮೀರದಂತೆ ಕಾಳಿದಾಸನೇ ಮುಂತಾದ ಅನೇಕ ಕವಿಗಳೂ ತಂತಮ್ಮ ಪ್ರತಿಭೆ ಪಾಂಡಿತ್ಯಗಳಿಗನುಸಾರವಾಗಿ ಸೀತಾದೇವಿಯ ಪಾತ್ರವನ್ನು ಚಿತ್ರಿಸಿ ಬಗೆ ಬಗೆಯಾಗಿ ಸೀತಾದೇವಿಯ ಯಶೋಗೀತೆಯನ್ನು ಹಾಡಿದ್ದಾರೆ.

ಶ್ರೀರಾಮನು ಗರ್ಭಿಣಿಯಾದ ಸೀತಾದೇವಿಯನ್ನು ಅಪವಾದ ಬಂದಿತೆಂಬ ಕಾರಣದಿಂದ ಕಾಡಿಗೆ ಕಳುಹಿಸಿದಾಗಿನಿಂದ ಹಿಡಿದು ಮುಂದೆ ಲವಕುಶರೊಡನೆ ಸೀತಾದೇವಿಯು ಅಯೋಧ್ಯೆಯಲ್ಲಿ ಸುಖವಾಗಿ ಪತಿಸೇವೆ ಮಾಡಿಕೊಂಡಿರುವವರೆಗಿನ ಕಥಾವಸ್ತುವನ್ನು ಲಕ್ಷ್ಮೀಶ ಕವಿಯು ಚಿತ್ರಿಸಿರುವನು.

ಸೀತಾದೇವಿಯು ಲಜ್ಜಾವತಿಯಾದ ಮುಗ್ಧೆಯಂತಿದ್ದರೂ, ಸತ್ವಶಾಲಿಯಾದ ದೇವಿಯಾಗಿದ್ದಾಳೆ. ಶ್ರೀರಾಮಚಂದ್ರನೂ ಸೀತಾದೇವಿಯೂ ಚಿರಕಾಲ ಸುಖವಾಗಿರುವರು. ಅವರಿಗೆ 'ಸರ್ವ ಸಂಪತ್ಸಮೃದ್ಧಿ'ಯಿದ್ದರೂ, ಸಂತಾನ ಭಾಗ್ಯವೊಂದು ದೊರೆಯದಿರುವುದಕ್ಕಾಗಿ ಶ್ರೀರಾಮನು ಮನನೊಂದು, ತನ್ನ ಪತ್ನಿಯೊಡನೆ–

ನೀರಿರ್ದ ಕಾಸಾರಕರವಿಂದಮಿಲ್ಲದೊಡೆ
ತಾರಕೆಗಳಿರ್ದ ಗಗನಕೆ ಚಂದ್ರನಿಲ್ಲದೊಡೆ
ಚಾರು ಯೌವನಮಿರ್ದ ಪೆಣ್ಗಿನಿಯ
ನಿಲ್ಲದೊಡೆ ಸನ್ನುತ ಪ್ರಜೆಗಳಿರ್ದ ॥

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಧಾರುಣಿಗೆ ಧರ್ಮಧರನಿಲ್ಲದೊಡೆ
ಸಿರಿಯಿರ್ದು
ದಾರವಂಶಕೆ ಕುವರನಿಲ್ಲದೊಡೆ
ಮೆರೆವುದೇ
ನಾರಿ ಪೇಳೆನೆ ಲಜ್ಜೆಯಿಂದ ತಲೆವಾಗಿ
ನಿಜಪತಿಗೆ ಜಾನಕಿ ನುಡಿದಳು ||

ಅವಳಿಗೂ ಮಕ್ಕಳ ಬಯಕೆಯಿದೆ, ಆಕೆ ಅದನ್ನೇ ವಿವರಿಸುತ್ತಾಳೆ—

ಕಂದನಾಡುವ ಬಾಲಲೀಲೆಯಂ
ನೋಡಿ ತೊದ
ಲೊಂದಿದ ಮಾತನುರೆ ಕೇಳ್ದು
ಮುದ್ದಿನ ಮುದ್ದೆ
ಯಂದದಂಗವನೆತ್ತಿಕೊಂಡು ನಳಿ
ತೋಳ್ಗಳಿಂದಪ್ಪಿ ಕೆಂಗುರುಳ್ಗಳೆಸೆವ
ಮುಂದಲೆಯು ಕಂಪನಾಘ್ರಾಣಿಸಿ
ತೊರೆದ ಜೊಲ್ಲ
ಕೆಂದುಟಿಯ ಬಾಯ್ದೆರೆಯನ್ನೈದೆ
ಚುಂಬಿಸಿ ಸೊಗಸು
ಗುಂದದಾಯೆಂದು ಪಂಚೇಂದ್ರಿಯ
ಪ್ರೀತಿಯಂ ಪಡೆವರಿನ್ನಾವ ಕೃತಕರೋ ||

ಹೀಗೆ ರಾಮನೂ ಸೀತೆಯೂ ಮಕ್ಕಳಿಲ್ಲದೆ ವ್ಯಥೆಯಿಂದ ಚಿಂತಾಕ್ರಾಂತರಾಗಿರುವಾಗ ವಸಿಷ್ಠಮುನಿಯು ಅಲ್ಲಿಗೆ ಬಂದು ನಿಮಗೆ ಮುಂದೆ ಸಂತಾನಾಭಿವೃದ್ಧಿಯಾಗುವುದು ಎಂದು ಹೇಳಿ ಪ್ರೀತಿಯಿಂದ ಅವರಿಬ್ಬರನ್ನೂ ಸಮಾಧಾನಗೊಳಿಸಿದನು.

ಕಾಲಕ್ರಮೇಣ ಸೀತಾದೇವಿ ಗರ್ಭವತಿಯಾಗಿ ವಸಂತ ಲಕ್ಷ್ಮಿಯಂತೆ ಶೋಭಿಸಿದಳು. ಇದನ್ನರಿತು ಶ್ರೀರಾಮಚಂದ್ರನು ನಾಲ್ಕನೆಯ ತಿಂಗಳಲ್ಲಿ ವಸಿಷ್ಠ ವಿಶ್ವಾಮಿತ್ರರುಗಳ ಹಿರಿತನದಲ್ಲಿ ಶಾಸ್ತ್ರೋಕ್ತವಾಗಿ ಪುಂಸವನ ಸೀಮಂತಗಳೆಂಬ ಗರ್ಭಸಂಸ್ಕಾರ ಕರ್ಮಗಳನ್ನು ಮಾಡಿಸಿ, ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ ದಕ್ಷಿಣೆಗಳನ್ನು ಕೊಟ್ಟು ತೃಪ್ತಿಗೊಳಿಸಿ, ಶಾಂತ ಮನಸ್ಕನಾಗಿ ವೈಭವದಿಂದ ಉತ್ಸವವನ್ನು ನೆರವೇರಿಸಿದನು.

ಶ್ರೀರಾಮನು ಸೀಮಂತೋತ್ಸವಕ್ಕಾಗಿ ಬಂದು ಸೇರಿದ್ದ ಜನರೆಲ್ಲರನ್ನು ಅವರವರ ತಾರತಮ್ಯಾನುಸಾರವಾಗಿ, ಉಪಚರಿಸಿ ಆದರಿಸಿ ಎಲ್ಲರನ್ನೂ ಕಳುಹಿಸಿಕೊಟ್ಟ ಬಳಿಕ ತಾನು ರಾಜ ಭೋಗವನ್ನನುಭವಿಸುತ್ತ ಸುಖದಿಂದಿರಲು ಸೀತಾದೇವಿಯು ಒಂದು ದಿನ "ಪ್ರಿಯನೇ ನನಗೆ ಪರಿಶುದ್ಧವಾದ ತಪೋವನದ ಪರ್ಣಶಾಲೆಯಲ್ಲಿರುವ ಋಷಿಪತ್ನಿಯರ ಸಹವಾಸದಲ್ಲಿ ಕೆಲವು ದಿನಗಳಿದ್ದು ಬರಬೇಕೆಂಬ ಬಯಕೆಯುಂಟಾಗಿದೆ. ಆದ ಕಾರಣ ನನ್ನನ್ನು ಮತ್ತೊಂದಾವೃತ್ತಿ ಅರಣ್ಯಕ್ಕೆ ಕಳುಹಿಸಿಕೊಡಬೇಕು" ಎಂದು ಕೇಳಿದಳು. ಇದರಿಂದ ಸೀತಾದೇವಿಯು ಎಷ್ಟು ಸ್ನೇಹಮಯಿಯೆಂಬುದನ್ನು ಲಕ್ಷ್ಮೀಶ ಕವಿ ರಮಣೀಯವಾಗಿ ತೋರ್ಪಡಿಸಿದ್ದಾನೆ. ಸೀತಾದೇವಿಯು ವೈಭವದ ಮಧ್ಯದಲ್ಲಿದ್ದೂ ಮುನಿವಧುಗಳ ಸ್ನೇಹ ಮಮತೆಗಳನ್ನು ಸ್ಮರಿಸಿಕೊಂಡು ಮತ್ತೊಮ್ಮೆ ಆಶ್ರಮಕ್ಕೆ ಹೋಗಲು ಇಚ್ಛಿಸಿದಾಗ ರಾಮಚಂದ್ರನೂ ಅದಕ್ಕೆ ಸಮ್ಮತಿಸುವನು. ರಜಕನೊಬ್ಬನ ದೂಷಣೆಯ ಮಾತಿಗೆ ಬೆಚ್ಚಿ ಗರ್ಭಿಣಿಯಾದ ಧರ್ಮಪತ್ನಿಯನ್ನು ಕಾಡಿಗೆ ಕಳುಹಿಸುವುದಕ್ಕೆ ರಾಮಚಂದ್ರನಿಗೆ ಸರಿಯಾದ ನೆಪವೇ ಸಿಕ್ಕುವುದು. ತನ್ನ ಪತಿಯು ತನ್ನನ್ನು ಪರಿತ್ಯಾಗ ಮಾಡುವುದಕ್ಕಾಗಿ ಲಕ್ಷ್ಮಣನೊಡನೆ ತನ್ನನ್ನು ಕಳುಹಿಸುತ್ತಿರುವನೆಂಬುದನ್ನು ಸೀತಾದೇವಿಯು ಅರಿಯಳು. ತನ್ನ ಪ್ರಾರ್ಥನೆಯನ್ನು ಲಾಲಿಸಿ ಆಶ್ರಮಕ್ಕೆ ತನ್ನನ್ನು ಕಳುಹಿಸುತ್ತಿರುವನೆಂದೇ ಅವಳ ಭಾವನೆ, ಮುನಿಪತ್ನಿಯರಿಗೆ ಕೊಡುವುದಕ್ಕಾಗಿ 'ಅಗರು ಚಂದನ ಕುಂಕುಮಾನುಲೇಪನ'ಗಳನ್ನು ಬಗೆ ಬಗೆಯ ದಿವ್ಯಾಂಬರಗಳನ್ನು ವಿವಿಧ ಮಣಿಭೂಷಣಗಳನ್ನು ಕಟ್ಟಿಸಿ ತೆಗೆದುಕೊಂಡು ಸಡಗರದಿಂದ ರಥವನ್ನೇರುವಳು. ತನ್ನ ಪತಿಯು ತನ್ನ ಕೋರಿಕೆಯನ್ನು ಸಲ್ಲಿಸಿದನೆಂದು ಅವಳು ತನಗುಂಟಾದ ಸಂತೋಷವನ್ನು ಹೇಳಲರಿಯಳು. ಅವಳು ತನ್ನ ಸಂತೋಷವನ್ನು ತಾನೇ ತಾಳಲಾರದೆ ತನ್ನತ್ತೆ ಕೌಸಲ್ಯೆಯೊಂದಿಗೆ

ನಂಬಿದರಭೀಷ್ಟಮಂ ಸಲಿಸುವ
ಕೃಪಾಳುತಾ
ನೆಂಬುದಂ ಕಾಣಿಸಿದನಿಂದೆನ್ನ
ಕಾಂತನೆನಗೆಂದು

ಎಂದು ಹೇಳಿ ಹಿರಿಯರಿಗೆಲ್ಲ ನಮಿಸಿ ನಡೆದಳು.

ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಬರುವ ಗುರುತರವಾದ ಕಾರ್ಯವನ್ನು ರಾಮಾನುಜನಾದ ಲಕ್ಷ್ಮಣನು ಮಾಡಬೇಕಾಯಿತು. 'ನಿರ್ದೋಷಿಯಾದ ಸೀತಾದೇವಿಯನ್ನು ಕಾಡಿನಲ್ಲಿ ಬಿಟ್ಟುಬರುವ ಕಠಿಣವಾದ ಈ ಕ್ರೂರ ಕೃತ್ಯವನ್ನು ಹೇಗೆ ಮಾಡಲಿ? ಇಂತಹ ದುಷ್ಕಾರ್ಯವನ್ನು ಮಾಡೆಂದು ರಾಮನು ಹೇಗೆ ನನಗೆ ಆಜ್ಞಾಪಿಸಿದನು' ಎಂದು ಚಿಂತಿಸುತ್ತಾ ಲಕ್ಷ್ಮಣನು ಅರಣ್ಯಮಾರ್ಗದಲ್ಲಿ ಹೋಗುತ್ತಾ ನಿರ್ಮಲವಾದ ಗಂಗಾತೀರಕ್ಕೆ ಸೀತೆಯೊಂದಿಗೆ ಬಂದನು. ನಂತರ ಗಂಗೆಗೆ ನಮಸ್ಕರಿಸಿ ಸೀತಾಸಹಿತನಾಗಿ ಅಂಬಿಗನ ದೋಣಿಯಲ್ಲಿ ದೇವನದಿಯನ್ನು ದಾಟಿ ಪಾಪನಾಶಿನಿಯಾದ ಪುಣ್ಯ ಜಲದಲ್ಲಿ ಸ್ನಾನ ಮಾಡಿ, ಘೋರವಾದ ಮಾರ್ಗದಿಂದ ದಂಡಕಾರಣ್ಯವನ್ನು ಪ್ರವೇಶಿಸಿದನು. ಸೀತಾದೇವಿಯು ಮುಂಭಾಗದಲ್ಲಿ ಕಾಣುತ್ತಿರುವ ಮಹಾರಣ್ಯವನ್ನು ನೋಡಿ ಭಯದಿಂದ ನಡುಗಿ ದುಃಖದಿಂದ ರಾಮನಾಮವನ್ನು ಜಪಿಸಿ 'ಎಲೈ ಲಕ್ಷ್ಮಣನೇ, ಈ ಮಹಾರಣ್ಯವು ಸಂಚಾರಕ್ಕೆ ಅಸದಳವಾಗಿ ತೋರುತ್ತಿರುವುದಲ್ಲಾ! ಈ ಸ್ಥಳದಲ್ಲೆಲ್ಲಿ ನೋಡಿದರೂ ಆಶ್ರಮವಾಸಿಗಳಾದ ಋಷಿಗಳೂ, ನಾರು ಮುಡಿನ್ನುಟ್ಟ ಋಷಿಪತ್ನಿಯರೂ, ವೇದಘೋಷ ಮಾಡುತ್ತಿರುವ ಋಷಿ ಪುತ್ರರೂ ಯಾಗಶಾಲೆಯಲ್ಲಿ ಹೊರಡುವ ಹೋಮಧೂಮವೂ ಕಾಣಬರುವುದಿಲ್ಲವಲ್ಲಾ' ಎಂದು ಹೇಳುತ್ತ ತನ್ನನ್ನು ಈ ಘೋರಾರಣ್ಯಕ್ಕೆ ಏಕೆ ಕರೆತಂದೆ? ಹೇಳು' ಎಂದು ಕೇಳಿದಾಗ ಲಕ್ಷ್ಮಣನು ಶ್ರೀರಾಮಾಜ್ಞೆಯನ್ನು ಹೇಳಲಾರದಾದ. ಅವನ ಕಣ್ಣಿನಿಂದ ಕಣ್ಣೀರು ಉಕ್ಕಿ ಹರಿಯಿತು. ಮೇಲೆ ಮೇಲೆ ಉಕ್ಕಿ ಬರುತ್ತಿರುವ ದುಃಖದಿಂದ ಬೆಂದು ಬೆಂಡಾಗಿ ಅತ್ಯಂತ ಕ್ರೂರವಾದ ಮಾತನ್ನು ಸೀತೆಗೆ ತಿಳಿಸಲಾರದೆ ಹೀಗೆ ಹೇಳಿದನು. 'ಇದುವರೆಗೂ ರಾಮನು ನಿನ್ನ ವಿಷಯದಲ್ಲಿ ಇಂತಹ ಕಠಿಣವಾಕ್ಯವನ್ನು ಹೇಳಿರಲಿಲ್ಲ. 'ಈಗಲಾದರೋ ಕ್ರೂರತರವಾದ ಅಪವಾದವು ಬಂದುದರಿಂದ ನಿನ್ನೊಡನೆ ಬಾಳಲೊಲ್ಲೆನೆಂದು ಅಸಹ್ಯಭಾವದಿಂದ ತೊರೆದುಬಿಟ್ಟು ಅರಣ್ಯಕ್ಕೆ ಕಳುಹಿಬಾ ಎಂದು ಹೇಳಿ ನನ್ನನ್ನು ಕಳುಹಿಸಿದನು. ಆದ್ದರಿಂದ ನಾನು ನಿನ್ನನ್ನು ಕರೆದುಕೊಂಡು ಈ ಕಾಡಿಗೈತಂದೆನು. ಇನ್ನು ಎಲ್ಲಿಗಾದರೂ ಹೊರಟುಹೋಗು' ಎಂದು ಹೇಳಿ ಲಕ್ಷ್ಮಣನು ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಗೋಳಾಡಿದನು.

ಸೀತಾದೇವಿಯ ಪತಿಭಕ್ತಿಯೂ, ಪತಿಪ್ರೇಮವೂ ಅಸಾಧಾರಣವಾದವುಗಳು. ಪತಿಯು ತನ್ನನ್ನು ಪರಿತ್ಯಜಿಸಿದನೆಂಬುದನ್ನು ಕೇಳಿ—

ಬಿರುಗಾಳಿ ಪೊಡೆಯಲ್ಕೆ ಕಂಪಿಸಿ
ಫಲಿತ ಕದಳಿ
ಮುರಿದಿಳೆಗೊರಗುವಂತೆ ಲಕ್ಷ್ಮಣನ
ಮಾತು ಕಿವಿ
ದೆರೆಗೆ ಬೀಳದಮುನ್ನ ಹೆಮ್ಮೈಸಿ
ಬಿದ್ದಳಂಗನೆ ಧರೆಗೆ ನಡ ನಡುಗುತ|
ಮರೆದಳಂಗೋಪಾಂಗಮಂ
ಬಳಿಕ ಸೌಮಿತ್ರಿ
ಮರುಗಿ ತಣ್ಣೀರ್ದಳಿದು ಪತ್ರದಿಂ
ಕೊಡೆವಿಡಿದು
ಸೆರಗಿಂದ ಬೀಸಿ ರಾಮನ ಸೇವೆ
ಸಂದುದೇತಗೆಂದು ರೋದಿಸಿದನು ||

ಗರ್ಭಿಣಿಯಾದ ಸೀತಾದೇವಿಯು ಆ ದಾರುಣ ವಾರ್ತೆಯನ್ನು ಕೇಳಿ ನಡುಗುತ್ತ ಮೂರ್ಛಿತಳಾಗಿ ಕೆಳಗೆ ಬೀಳುವ ದೃಶ್ಯಕ್ಕೆ ಕವಿಯು ಈ ಉಪಮಾನವನ್ನು – ಅದೂ ಫಲಿತು ಗೊನೆಯಿಂದ ಕೂಡಿರುವ ಕದಳಿಯ ಉಪಮಾನ–ಕೊಟ್ಟಿರುವುದು ಬಹಳ ಸ್ವಾರಸ್ಯವಾಗಿಯೂ ಹೃದಯಂಗಮವಾಗಿಯೂ ಇದೆ. ಮೂರ್ಛೆಯಿಂದೆಚ್ಚೆತ್ತ ಮೇಲೆ ಸೀತಾದೇವಿಯು ಹಲುಬಿ ಹಂಬಲಿಸುವ ಶೋಕಾಲಾಪವಂತೂ ಕಲ್ಲನ್ನು ಕರಗಿಸುವಂತಹದು. ಕೌಶಿಕ ಮುನಿಯೊಡನೆ ಮಿಥಿಲಾಪುರಕ್ಕೆ ಬಂದು ತನ್ನನ್ನು ಮದುವೆಯಾದಂದಿನಿಂದಲೂ ರಾಮನು ತನ್ನೊಡನೆ ಸುಖಿಸಿ ವಿರಹವು ಸಂಭವಿಸಿದಾಗ ನವೆದುದಲ್ಲದೆ ರಾವಣನನ್ನು ಕೊಂದು ತನಗಾಗಿ ಕಷ್ಟಪಟ್ಟು ಕೂಡ ಕೊನೆಗೆ ತನ್ನನ್ನು ಪರಿತ್ಯಜಿಸಿದನೆಂದು ಮಾತ್ರವೇ ಅವಳು ಗೋಳಾಡುವಳು.

ತೊಳಪ ನಾಸಿಕದ ನುಣ್ಗದಪುಗಳ
ಪೊಳೆವ ಕಂ
ಗಳ ತುರುಗಿದೆವೆಯ ನಿಡುಪುರ್ಬುಗಳ
ಪೆರನೊಸಲ
ಥಳಿ ಥಳಿಪ ಮಕುಟದ ಕಿವಿಯ ಮಕರ
ಕುಂಡಲದ ಕೋಮಲಿತ ಜಬುಕಾಗ್ರದ|
ಲಲಿತಾರುಣಧರದ ಮಿರುಗುವರದನ
ಪಂಕ್ತಿ
ಗಳ ಸೂಸುವೆಳನಗೆಯ ಮೋಹನದ
ಚಲ್ವಿನೊ
ಬ್ಬುಳಿಯೆನಿಪ ರಾಘವನ ಸಿರಿಮೊಗವ
ನೆಂತು ನೋಡದೆ ಮಾಣ್ಬೆನಕಟೆಂದಳು ||

ಇದನ್ನು ಓದಿದಾಗ ನಮ್ಮ ಅಂತರಾತ್ಮವೇ ದುಃಖದಿಂದ ಬೇಗುದಿಗೊಳ್ಳುವುದು. ಸೀತಾದೇವಿಯು ಹಲವು ವಿಧದಲ್ಲಿ ಹಂಬಲಿಸಿ ಗೋಳಾಡಿದ ಬಳಿಕ, 'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಎಂದು ಹೇಳುವುದನ್ನು ಕೇಳಿದಾಗ ಅನನ್ಯ ಸುಲಭವಾದ ಅವಳ ಪತಿಪ್ರೇಮವನ್ನು ಕಂಡು ನಾವು ಕಥೆಯನ್ನು ಮುಂದೆ ಓದದೆ ತುಸು ನಿಲ್ಲಬೇಕಾಗುತ್ತದೆ ಸಹಾನುಭೂತಿಯಿಂದ: ಬಹು ಜನ್ಮಗಳಿಂದ ಮಾಡಿದ ಪಾಪದಿಂದ ಹೆಣ್ಣಾಗಿ ಹುಟ್ಟಿ ಜೀವಂತಳಾಗಿರುವ ನನ್ನದೆ ದೊಡ್ಡ ತಪ್ಪು ಎಂದು ಹೇಳುವ ಸೀತೆಯ ಮಾತು ಇಂದಿನ ಹೆಣ್ಣುಗಳಿಗೂ ಅಪವಾದವಲ್ಲ ಎಂದೆನಿಸುತ್ತದೆ. 'ಇನ್ನು ಸಾಕು ಲಕ್ಷ್ಮಣಾ ಇನ್ನು ನೀನಿಲ್ಲಿರಬೇಡ, ನೀನು ಹೋಗುವ ಮಾರ್ಗದಲ್ಲಿ ಹೆಜ್ಜೆ ಹೆಜ್ಜೆಗೂ ನಿನಗೆ ಸುಖವಾಗಲಿ' ಎಂದು ಲಕ್ಷ್ಮಣನನ್ನು ಹರಸಿ ಕಳುಹಿಸಿಕೊಡುವ ದೃಶ್ಯವಂತೂ ಓದುಗರ ಹೃದಯವನ್ನು ಕಲಕಿಬಿಡುತ್ತದೆ. ಅಂತಹ ಸೀತಾದೇವಿಯ ದುಃಖವನ್ನು ಕಂಡು ಕಾನನದ ಮೃಗಪಕ್ಷಿಗಳು ಕೂಡ ತಮ್ಮ ವ್ಯಾಪಾರವನ್ನು ಮರೆತು ಅವಳನ್ನು ಸೇವಿಸಿದುವೆಂಬುದರಲ್ಲಿ ಆಶ್ಚರ್ಯವೇನು! ನಿರಾಪರಾಧಿಯಾದ ತನ್ನನ್ನು ಶ್ರೀರಾಮಚಂದ್ರನು ಕಾಡಿಗೆ ಕಳುಹಿಸಿದ್ದೂ ಕೂಡ, ಕರುಣಾಳುವಾದ ರಾಘವನಲ್ಲಿ ತಪ್ಪಿಲ್ಲವೆಂದು ಹೇಳುವ ಸೀತಾದೇವಿಯ ಸಾತ್ವಿಕತೆಯು ಎಷ್ಟು

ಶ್ರೇಷ್ಠವಾದುದೆಂಬುದನ್ನು ಮನ ಊಹಿಸಲು ಪ್ರಯತ್ನಿಸುತ್ತದೆ.

ಸೀತಾದೇವಿಯು ಅನುಪಮವಾದ ಪುತ್ರ ವಾತ್ಸಲ್ಯವುಳ್ಳವಳೂ ಆಗಿದ್ದಾಳೆ. ಮಕ್ಕಳಾಗಬೇಕೆಂದು ಅವಳಿಗೆಷ್ಟು ಆಸೆಯಿದ್ದಿತೆಂಬುದನ್ನು ನಾವು ಮೊದಲೇ ನೋಡಿದ್ದೇವೆ. ಕಾಡಿನಲ್ಲಿ ಹಂಬಲಿಸುತ್ತಿದ್ದ ಸೀತಾದೇವಿಯನ್ನು ವಾಲ್ಮೀಕಿ ಮುನಿಯು ತನ್ನ ಆಶ್ರಮಕ್ಕೆ ಕರೆದೊಯ್ಯುವನು. ಆ ಬಳಿಕ ಚೆಲ್ವೆರಡು ರೂಪಾದಂತೆ, ವಿಮಲತೆ ಕವಲ್ತಂತೆ ತೋರುವ ರೂಪರಾಶಿಗಳಾದ ಮತ್ತು ತೇಜಸ್ವಿಗಳಾದ ಲವಕುಶರನ್ನು ಅವಳು ಪಡೆದು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಅವರನ್ನು ಪ್ರೀತಿಸುತ್ತಿರುವಳು.

ವಾಲ್ಮೀಕಿಯು ಮಕ್ಕಳಿಗೆ ಹಾಕುವ ಉಡುಗೆ ತೊಡಿಗೆಗಳನ್ನು ತೊಡಿಸಿ ಆನಂದ ಪಡುವನು, ಬಾಲಲೀಲೆಯ ಆಟಗಳನ್ನು ಆಡಿಸಿ ಸಂತೋಷಿಸುವನು, ಜಪತಪ ಸಮಾಧಿಗಳ ಕಾಲವನ್ನು ಲಕ್ಷ್ಯಮಾಡದೆ ಆ ಮಕ್ಕಳನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಿಸುವನು, ರುಚಿಕರವಾದ ತಿಂಡಿಗಳನ್ನು ಕೊಟ್ಟು, ಸರ್ವಕಾಲದಲ್ಲಿಯೂ ಆ ಮಕ್ಕಳ ಪ್ರೇಮದಿಂದ ಸಂತೋಷಚಿತ್ತನಾಗಿರುತ್ತಿರಲು ದಿನದಿನಕ್ಕೆ ಆಶ್ರಮವಾಸಿಗಳ ಆನಂದವು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯನ್ನು ಹೊಂದುತ್ತಿದ್ದಿತು. ಲವಕುಶರಿಗೆ ಯಜ್ಞಯಾಗಾದಿ ಕರ್ಮಗಳನ್ನು ಮಾಡುವ ವಿಧಾನವನ್ನೂ ಸಮಸ್ತ ಶಾಸ್ತ್ರಾಗಮಗಳನ್ನು ತಾನು ಬೋಧಿಸಿದ ಧರ್ಮಗಳಿಗೆ ತಕ್ಕ ತತ್ತ್ವಮಾರ್ಗಗಳನ್ನು, ಸಂಪೂರ್ಣವಾದ ವೇದಾಂತ ಶಾಸ್ತ್ರಗಳನ್ನು ಅವರಿಗೆ ಕಲಿಸಿ ವಾಲ್ಮೀಕಿಯು ರಾಜನೀತಿಯನ್ನು ಧನುರ್ವಿದ್ಯೆಯನ್ನು ತಿಳಿಸಿ ನಿಪುಣರನ್ನಾಗಿ ಮಾಡಿ, ಮಧುರ ಸ್ವರದಿಂದ ರಾಮಾಯಣವನ್ನು ಮೊದಲಿಂದ ತುದಿಯವರೆಗೆ ಕಂಠಗತವಾಗಿ ಹಾಡುವಂತೆ ಅಭ್ಯಾಸ ಮಾಡಿಸಿದನು.

ಮುಂದೆ ಲವಕುಶರು ಶ್ರೀರಾಮನ ಯಜ್ಞದ ಕುದುರೆಯನ್ನು ಕಟ್ಟಿಹಾಕಿ ಯುದ್ಧಕ್ಕೆ ಬಂದ ಶತ್ರುಘ್ನ, ಲಕ್ಷ್ಮಣ, ಭರತ ಹಾಗೂ ಶ್ರೀರಾಮರನ್ನು ಯುದ್ಧದಲ್ಲಿ ಸೋಲಿಸುತ್ತಾರೆ. ವಾಲ್ಮೀಕಿ ಮಹರ್ಷಿಯು ವರುಣನು ಮಾಡಿದ ಯಜ್ಞವನ್ನು ಪೂರೈಸಿಕೊಂಡು ಪಾತಾಳಲೋಕದಿಂದ ಬಂದ ಮೇಲೆ, ಲವಕುಶರಾರೆಂಬುದು ರಾಮಚಂದ್ರನಿಗೆ ತಿಳಿಯುವುದು. ಅವನು ಮಕ್ಕಳನ್ನು ಮುದ್ದಿಸಿ ತನ್ನೊಡನೆ ಕರೆದುಕೊಂಡು ಹೋದ ಬಳಿಕ, ಒಂಟಿಯಾಗಿ ಬಂದ ವಾಲ್ಮೀಕಿಯರನ್ನು ಸೀತಾದೇವಿಯು ಆಶ್ರಮದ್ವಾರದಲ್ಲೆ ಕಂಡು–

ಚಿತ್ತದೊಳ ಮರುಗುತೇನಾದರೆಲೆ
ತಾತ ಕುಶಲವರೊಡಲ್ವಿಡಿವೆನೆಂತು
ಪೆತ್ತಂದು ಮೊದಲಾಗಿ ಪತಿ ವಿರಹಮಂ
ಮರೆದು।
ಪೊತ್ತಿರ್ದೆ ನೀದೇಹಮಂ ನನ್ನ
ಸುತರನಾ
ಗಿರ್ತು ನೀನ್ಯೆತಂದೆ ತಂದೆ ಹೇಳೆಂದು
ಜಾನಕಿ ಬಿದ್ದಳಂಘ್ರಿಗಳ್ಗೆ ॥

ಅವಳ ಪುತ್ರಪ್ರೇಮವು ಇಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಆ ಬಳಿಕ ಮುನಿ ಶ್ರೇಷ್ಠನಾದ ವಾಲ್ಮೀಕಿಯು ಸಮಾಧಾನ ಮಾಡಿ "ಅಮ್ಮಾ! ನಿನ್ನ ಮಕ್ಕಳಾದ ಕುಶಲವರನ್ನು ತಂದೆಯಾದ ರಾಮನು ತನ್ನೊಡನೆ ಅಯ್ಯೋಧ್ಯಾಪುರಕ್ಕೆ ಕರೆದುಕೊಂಡು ಹೋದನು. ಇದಕ್ಕಾಗಿ ನೀನು ವ್ಯಸನಪಡಬೇಡ. ಇನೋ ಈಗಲೇ ನಿನ್ನನ್ನು ನಿನ್ನ ಗಂಡನ ಬಳಿಗೆ ಕರೆದುಕೊಂಡು ಹೋಗಿ ಬಿಟ್ಟು ಬರುವೆನು'' ಎಂದು ಹೇಳಿ ಅವಳನ್ನು ಒಡಂಬಿಸಿ ಅತ್ಯಂತ ವೈಭವದಿಂದ ಹೆಣ್ಣುಮಗಳಿಗೆ ಮಾಡಬೇಕಾದ ಮರ್ಯಾದೆಗಳನ್ನು ಮಾಡಿಸಿ ಅಂದವಾದ ರಥದಲ್ಲಿ ಕುಳ್ಳಿರಿಸಿಕೊಂಡು ಅಯ್ಯೋಧ್ಯಾನಗರಕ್ಕೆ ಬಂದು ಸೀತಾದೇವಿಗೆ ಶ್ರೀರಾಮನನ್ನು ತೋರಿಸಿದನು. ಹೀಗೆ ಸೀತಾರಾಮರು ಆಶ್ರಮದಲ್ಲೇ ಒಬ್ಬರನ್ನೊಬ್ಬರು ಕಾಣದಂತೆ ಮಾಡಿರುವುದರಲ್ಲಿ ಕವಿಯು ತನ್ನ ಕಲಾಭಿರುಚಿಯನ್ನು ತೋರಿಸಿದ್ದಾನೆ. ಅವರು ಹಿಂದು ವೇಳೆ ಆಶ್ರಮದಲ್ಲೇ ಒಬ್ಬರನ್ನೊಬ್ಬರು ನೋಡಿದ್ದರೆ ಸುಖದುಃಖ ಸಂತಾಪಗಳೂ ಏಕಕಾಲದಲ್ಲಿ ಹೊರಹೊಮ್ಮಬೇಕಾದ ಆಗಿನ ದೃಶ್ಯವನ್ನು ವರ್ಣಿಸುವುದೇ ಅಸಾಧ್ಯವಾಗುತ್ತಿದ್ದಿತು. ಕವಿಯು ಅದನ್ನು ಎಷ್ಟೇ ಹೆಚ್ಚಾಗಿ ವರ್ಣಿಸಿದ್ದರೂ ನಮ್ಮ ಊಹೆಗೇ ಅದನ್ನು ಬಿಟ್ಟಿರುವುದರಿಂದ ಈಗ ಒದಗಿರುವ ಸೊಗಸು ಆಗೆಂದಿಗೂ ಇರುತ್ತಿರಲಿಲ್ಲ. ಹೀಗೆ ಲಕ್ಷ್ಮೀಶಕವಿಯ ಸೀತಾದೇವಿಯು ಆದರ್ಶ ಪತಿವ್ರತಾ ಶಿರೋಮಣಿ, ಸ್ನೇಹಮಯಿ, ಪ್ರೇಮಮಯಿ, ವಾತ್ಸಲ್ಯಮಯಿಯಾಗಿ ಮೆರೆದು ಪಾಠಕರ ಹೃದಯದಲ್ಲಿ ಅಮರಳಾಗಿದ್ದಾಳೆ.

ಒಟ್ಟಿನಲ್ಲಿ ಉಪಮಾಲೋಲ ಲಕ್ಷ್ಮೀಶ ಕವಿಯ ಕವಿತಾದೋರಣೆಯೂ, ಶಬ್ದ ಸಂಪತ್ತೂ, ಕಥಾಕೌಶಲವೂ ಶ್ಲಾಘನೀಯವಾಗಿವೆ. ಜಾಣರನ್ನು ತಲೆದೂಗಿಸುವಂತೆ ಕಾವ್ಯರಚನೆ ಮಾಡುವುದಾಗಿ ಗ್ರಂಥದ ಆರಂಭದಲ್ಲಿ ಅವನು ಮಾಡಿರುವ ಪ್ರತಿಜ್ಞೆಯನ್ನು ಚೆನ್ನಾಗಿ ಕಾಪಾಡಿಕೊಂಡಿದ್ದಾನೆ. 'ಕರ್ಣಾಟಕವಿ ಚೈತ್ರವನ ಚೂತಲಕ್ಷ್ಮೀಶ'ನೆಂಬ ಹೆಸರಿಗೆ ತಕ್ಕಹಾಗೆ ಉತ್ತಮ ರೀತಿಯಲ್ಲಿ ಅವನು ಕಾವ್ಯವನ್ನು ಬರೆದು ಶಾಶ್ವತವಾದ ಕೀರ್ತಿಯನ್ನು ಗಳಿಸಿದ್ದಾನೆ. ★

## ಪ್ರಕಟನೆ

**ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.**

**–ತಿ. ತಿ. ದೇ.**

(8ನೇ ಪುಟದಿಂದ)

ಗಳಲ್ಲಿ ವೈದೇಹಿಯೊಡನೆ ವಿಹರಿಸುತ್ತಿರಬಹುದು. ನೀನು ಎಚ್ಚರದಲ್ಲಿರುವಾಗಲೂ ನಿದ್ರಿಸುತ್ತಿರುವಾಗಲೂ ನಾನು ಸಮಸ್ತ ಕಾರ್ಯಗಳನ್ನು ನೋಡಿಕೊಳ್ಳುತ್ತೇನೆ'. ರಾಮನು ಒಪ್ಪಿದನು. ಅವರು ಕಾಡಿಗೆ ಹೊರಡುವಾಗ ಲಕ್ಷ್ಮಣನ ತಾಯಿಯಾದ ಸುಮಿತ್ರೆಯು ಮಗನನ್ನು ಕುರಿತು ಅಳುತ್ತಾ ಅವನ ಶಿರಸ್ಸನ್ನಾಘ್ರಾಣಿಸಿ ಅವನಿಗೆ ಶ್ರೇಯಸ್ಸಾಗಲೆಂದು ಹರಸಿ 'ವತ್ಸ, ನೀನು ವನವಾಸಕ್ಕೆಂದೇ ಜನಿಸಿದಂತಾಯಿತು. ರಾಮನು ನಿನಗೆ ಆಪ್ತಮಿತ್ರನಾಗಿ ಅಣ್ಣನಾಗಿರುವನು. ವನಕ್ಕೆ ಹೋದಾಗ ಅವನಲ್ಲಿ ಅತಿಶಯವಾದ ಪ್ರೀತಿಯನ್ನಿಟ್ಟಿರು. ಎಂದೂ ತಪ್ಪಿ ನಡೆಯಬೇಡ, ಅವನು ಕಷ್ಟದಲ್ಲಿರಲಿ ಸುಖದಲ್ಲಿರಲಿ, ನಿನಗೆ ಅವನೇ ಗತಿಯೆಂದು ತಿಳಿದುಕೊ. ಅಣ್ಣನಿಗೆ ಅಧೀನವಾಗಿ ನಡೆದುಕೊಳ್ಳುವುದು ಸತ್ಪುರುಷರ ಧರ್ಮ. ನಮ್ಮ ಇಕ್ಷ್ವಾಕು ವಂಶಕ್ಕೆ ಹಿಂದಿನಿಂದ ಬಂದ ಅನುರೂಪವಾದ ನಡತೆ. ದಾನ, ಯಜ್ಞ, ದೀಕ್ಷೆ, ಯುದ್ಧದಲ್ಲಿ ದೇಹತ್ಯಾಗ–ಇವು ನಮ್ಮ ವಂಶಕ್ಕೆ ಬಂದ ಸನಾತನ ಧರ್ಮ. ರಾಮನನ್ನು ದಶರಥನೆಂದು ಭಾವಿಸು, ಜಾನಕಿಯನ್ನು ನಾನೆಂದು ಭಾವಿಸು, ಅಡವಿಯನ್ನು ಅಯೋಧ್ಯೆಯೆಂದು ತಿಳಿ, ಸುಖವಾಗಿ ಹೋಗಿ ಬಾ' ಎಂದು ಸ್ವಸ್ತ್ಯಯನ ಮಾಡಿ ಕಳುಹಿಸಿದಳು – ರಾಮ, ಲಕ್ಷ್ಮಣ ಸೀತೆಯರು ಕಾಡಿಗೆ ತೆರಳಿದರು. ಸೀತಾರಾಮರ ರಕ್ಷಣೆಯ ಜವಾಬ್ದಾರಿ ತನ್ನದೆಂದು ಲಕ್ಷ್ಮಣನು ಭಾವಿಸಿದನು. ಅವರಿಗೆ ಬೇಕಾದ ಎಲ್ಲ ಸೌಲಭ್ಯಗಳನ್ನು ಕಲ್ಪಿಸಲು ಬದ್ಧಕಂಕಣನಾದ ಅವನ ಸೇವಾ ಪರಾಕಾಷ್ಠೆಯನ್ನು ಗುಹಾಶ್ರಮದಲ್ಲಿ ಕಾಣಬಹುದು. ರಾಮಾದಿಗಳು ಗುಹನ ಆಶ್ರಮವನ್ನು ಸಾಯಂಕಾಲ ಹೋಗಿ ಸೇರಿದರು. ಇಂಗುದೀವೃಕ್ಷದ ಕೆಳಗೆ ತಂಗಿದರು. ಲಕ್ಷ್ಮಣನು ರಾಮನಿಗೆ ಕುಡಿಯಲು ನೀರನ್ನು ತಂದುಕೊಟ್ಟು ಹಸಿರೆಲೆ ಮತ್ತು ದರ್ಭೆಯ ಹುಲ್ಲಿನಿಂದ ಹಾಸಿಗೆಯನ್ನು ಸಿದ್ಧಪಡಿಸಿದನು. ಅವರು ಕೈಕಾಲುಗಳನ್ನು ತೊಳೆದುಕೊಳ್ಳಲು ನೀರನ್ನೂ ಒದಗಿಸಿದನು. ಸೀತಾರಾಮರು ಮಲಗಲು ಹೋದಾಗ ತಾನು ಧನುಷ್ಪಾಣಿಯಾಗಿ ಅವರ ಕಾವಲಿಗೆ ನಿಂತನು. ಪರಮಮಿತ್ರನಾದ ಗುಹನು ಲಕ್ಷ್ಮಣನಿಗೂ ಒಂದು ಹಾಸಿಗೆಯನ್ನು ನಿರ್ಮಿಸಿ ಅಲ್ಲಿ ಅವನು ಪವಡಿಸಬಹುದೆಂದೂ ತಾನೂ ತನ್ನ ಅನುಚರರೂ ಅವರ ರಕ್ಷಣೆಯನ್ನು ನೋಡಿಕೊಳ್ಳುತ್ತೇವೆಂದೂ ತಿಳಿಸಿದನು. ಲಕ್ಷ್ಮಣನಿಗೆ ಯಾರಲ್ಲಿಯೂ ನಂಬಿಕೆಯಿಲ್ಲ, ಸೀತಾರಾಮರ ರಕ್ಷಣೆ ತನ್ನದೆಂದೇ ಭಾವನೆ. ಗುಹನನ್ನು ಕುರಿತು 'ಗುಹಾ, ತ್ರಿಲೋಕಾಧಿಪತ್ಯವನ್ನು ವಹಿಸಲು ಶಕ್ತನಾದ ರಾಮನು ಈ ತೃಣ ಶಯ್ಯೆಯಲ್ಲಿ ಮಲಗುವ ಸ್ಥಿತಿ ಬಂದಿರುವಾಗ ಯಾರಿಗೆ ತಾನೆ ನಿದ್ರೆ ಬರುತ್ತದೆ' ಎಂದು ಹೇಳಿ ಮಾತನ್ನು ತಿರುಗಿಸಿ ಅಯೋಧ್ಯೆಯ ವಿಷಯವಾಗಿ ಚಿಂತಿಸುತ್ತಾ ರಾತ್ರಿಯೆಲ್ಲ ಎಚ್ಚರದಿಂದಲೇ ಕಳೆದನು.

ರಾಮಾದಿಗಳು ಗಂಗಾನದಿಯನ್ನು ದಾಟಲು ಅನುವಾದರು. ಆಗ ಜೊತೆಯಲ್ಲಿದ್ದ ಸಾರಥಿಯಾದ ಸುಮಂತ್ರನು ಇಷ್ಟವಿಲ್ಲದಿದ್ದರೂ ಹಿಂತಿರುಗಬೇಕಾದಾಗ, ದಶರಥನಿಗೆ ರಾಮಾದಿಗಳ ಸಂದೇಶವನ್ನು ಕೇಳಿದನು. ರಾಮನು ಸೂಕ್ತ ರೀತಿಯಲ್ಲಿ ತನ್ನ ಸಂದೇಶವನ್ನು ತಿಳಿಸಿದನು. ಲಕ್ಷ್ಮಣನಾದರೋ ತನಗೆ ದಶರಥನಲ್ಲಿದ್ದ ಅಸಮಾಧಾನವನ್ನೂ ರಾಮನಿಗಾದ ಅನ್ಯಾಯವನ್ನು ಸ್ಪಷ್ಟವಾಗಿ ಹೇಳಿ ಕಳುಹಿದನು. ಅವನು ಬುಸುಗುಟ್ಟುತ್ತ ಕೋಪದಿಂದ ಹೀಗೆಂದನು 'ಸುಮಂತ್ರ, ಈ ರಾಜಪುತ್ರನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದುದು ಯಾವ ತಪ್ಪಿಗಾಗಿ? ಕೈಕೇಯಿಯ ತುಚ್ಛವಾದ ಆಜ್ಞೆಯನ್ನು ಮನ್ನಿಸಿ ರಾಜನು ಇಂತಹ ಕಾರ್ಯವನ್ನು ಮಾಡಬಹುದೆ? ಒಟ್ಟಿನಲ್ಲಿ ನಾವು ಕಷ್ಟಕ್ಕೆ ಸಿಕ್ಕಿದೆವು. ರಾಜನು ಮಾಡಬಾರದ ಕೆಲಸವನ್ನು ಮಾಡಿದನು. ಇದು ವಿವೇಕವಿಲ್ಲದ ಬುದ್ಧಿಮಾಂದ್ಯದಿಂದ ಕೂಡಿದ ಲೋಕಶಾಸ್ತ್ರವಿರುದ್ಧವಾದ ಕಾರ್ಯ, ಇದು ರಾಜನಿಗೆ ಕೆಟ್ಟ ಹೆಸರನ್ನು ತರುತ್ತದೆ. ಮಹಾರಾಜನಲ್ಲಿ ನನಗೆ ತಂದೆಯೆಂಬ ಭಾವನೆಯಿಲ್ಲ. ಶ್ರೀರಾಮನೇ ನನಗೆ ತಂದೆ, ಅಣ್ಣ, ಪ್ರಭು, ಬಂಧು–ಎಲ್ಲವೂ. ಸಮಸ್ತ ಜನರಿಗೂ ಪ್ರಿಯನಾಗಿದ್ದ ಸರ್ವರ ಹಿತದಲ್ಲಿಯೂ ಆಸಕ್ತನಾಗಿದ್ದ ಶ್ರೀರಾಮನನ್ನು ಪರಿತ್ಯಜಿಸಿದ ಮೇಲೆ ಆ ರಾಜನಲ್ಲಿ ಯಾವ ಮನುಷ್ಯನು ಅನುರಾಗವಿಟ್ಟಾನು?

ರಾಮಾದಿಗಳು ಮುಂದೆ ಸಾಗಿದರು. ಅಯೋಧ್ಯೆಯ ದುಃಸ್ಥಿತಿಯನ್ನು ನೆನೆದು ರಾಮನು ಲಕ್ಷ್ಮಣನು, ಸುಮಿತ್ರೆ, ಕೌಸಲ್ಯೆ ಮತ್ತು ತಂದೆ ದಶರಥ–ಇವರ ರಕ್ಷಣೆಯ ಸಲುವಾಗಿ ಅಯೋಧ್ಯೆಗೆ ಹೋಗಬೇಕೆಂದೂ ಸೀತೆ ಮತ್ತು ತಾನು ಮುಂದೆ ಕಾಡಿಗೆ ಹೋಗಿ ವಾಸಮಾಡುವರೆಂದೂ ತಿಳಿಸಿದನು. ಲಕ್ಷ್ಮಣನು ಖಡಾಖಂಡಿತವಾಗಿ ಮುಂದಿನ ಉತ್ತರವನ್ನಿತ್ತನು:– "ಅತ್ತಿಗೆಯಾಗಲಿ ನಾನಾಗಲಿ ನಿನ್ನನ್ನು ಬಿಟ್ಟು ಒಂದು ಮುಹೂರ್ತವೂ ಜೀವಿಸಲಾರೆವು. ನೀನಿಲ್ಲದಿದ್ದರೆ ನೀರಿನಿಂದ ಹೊರಗೆ ಹಾಕಿದ ಮೀನುಗಳಂತಾಗುತ್ತೇವೆ. ನಿನ್ನನ್ನಾಗಲಿ ನನ್ನ ತಂದೆ ತಾಯಿಗಳನ್ನಾಗಲಿ ತಮ್ಮಂದಿರನ್ನಾಗಲಿ ಹೋಗಿ ನೋಡುವ ಬಯಕೆ ನನಗಿಲ್ಲ. ನೀನಿಲ್ಲದ ಸ್ವರ್ಗವೂ ನನಗೆ ಬೇಡ".

ಹಾಗೆಯೇ ಕಾಡಿನಲ್ಲಿ ಲಕ್ಷ್ಮಣನು ಸೀತಾರಾಮರಿಗೆ ಅನವರತ ಶುಶ್ರೂಷೆಯನ್ನು ಮಾಡುತ್ತಿದ್ದರೂ ಎಂದೂ ಸ್ವಾತಂತ್ರ್ಯವನ್ನು ವಹಿಸಲು ಒಪ್ಪಲಿಲ್ಲ. ರಾಮನು ಪಂಚವಟಿಯಲ್ಲಿ ಜಲರಾಮಣೀಯಕವೂ ಸ್ಥಳರಾಮಣೀಯಕವೂ ಆದ ಸ್ಥಳವೊಂದರಲ್ಲಿ ಪರ್ಣಶಾಲೆಯನ್ನು ನಿರ್ಮಿಸು ಎಂದು ಲಕ್ಷ್ಮಣನಿಗೆ ತಿಳಿಸಿದನು. ಅದಕ್ಕೆ ಲಕ್ಷ್ಮಣನ ಉತ್ತರವಿದು "ಅಣ್ಣ, ನಿನ್ನೆದುರಿಗೆ ನೂರುವರ್ಷಗಳಾದರೂ ನಾನು ಸ್ವತಂತ್ರವಾಗಿ ವರ್ತಿಸಲಾರೆ. ಉತ್ತಮವಾದ ಸ್ಥಳವನ್ನು ಗೊತ್ತುಮಾಡಿ 'ಇಲ್ಲಿ ಪರ್ಣಶಾಲೆಯನ್ನು ನಿರ್ಮಿಸು' ಎಂದು ಆಜ್ಞಾಪಿಸು". ರಾಮನು ಸೂಚಿಸಿದ ಸ್ಥಳದಲ್ಲಿ ಲಕ್ಷ್ಮಣನು ಉತ್ತಮ ರೀತಿಯಲ್ಲಿ ಪರ್ಣಶಾಲೆಯನ್ನು ನಿರ್ಮಿಸಿದನು.

ಚಿತ್ರಕೂಟದಲ್ಲಿರುವಾಗ ಹಿಂದಕ್ಕೆ ಕರೆದುಕೊಂಡು ಹೋಗಲು ಭರತನು ಚತುರಂಗ ಸೈನ್ಯದೊಡನೆ ಬಂದನು. ಆದರಿಂದ ಅರಣ್ಯದ ವಾತಾವರಣವು ಉಲ್ಲೋಲ ಕಲ್ಲೋಲವಾಯಿತು. ರಾಮನ ಆಪೇಶದ ಪ್ರಕಾರ ಲಕ್ಷ್ಮಣನು ಮರದ ಮೇಲೆ ಹತ್ತಿ ಅದೇನೆಂದು ನೋಡಿದನು. ಅದು ಭರತನ ಸೈನ್ಯದಂತೆಯೇ ಕಂಡಿತು. ರಾಮನ ರಕ್ಷಣೆಯಲ್ಲಿ ನಿರತನಾಗಿದ್ದ ಲಕ್ಷ್ಮಣನು ಭರತನು ರಾಮನನ್ನು ಸಂಹರಿಸುವುದಕ್ಕೆ ಬಂದಿರುವನೆಂದು ಭಾವಿಸಿದನು, ಶೀಘ್ರಕೋಪಿಯಾದ ಅವನಿಗೆ ಭರತನ ವಿಷಯದಲ್ಲಿ ದುರ್ಭಾವವೇ ಮೂಡಿತು. ತಕ್ಷಣ ಅವನು ರಾಮನನ್ನು ಕುರಿತು ಯುದ್ಧಕ್ಕೆ ಸಿದ್ಧವಾಗಬೇಕೆಂದೂ ಭರತನನ್ನು ಸಂಹಾರ ಮಾಡುವುದು ಅಧರ್ಮವಲ್ಲವೆಂದೂ ತಾವು ಆ ಕೆಲಸದಲ್ಲಿ ತೊಡಗಬೇಕೆಂದೂ ಆರ್ಭಟಿಸಿದನು. ವಿವೇಕಿಯೂ ಮೃದುಸ್ವಭಾವದವನೂ ಧರ್ಮಿಷ್ಠನೂ ಆದ ರಾಮನು ಲಕ್ಷ್ಮಣನಿಗೆ ಹೀಗೆ ಉತ್ತರಿಸಿದನು. "ಲಕ್ಷ್ಮಣ, ನೀನು ಭರತ ವಿಷಯದಲ್ಲಿ ಹೀಗೆ ಶಂಕಿಸಲು ಕಾರಣವೇನು? ಎಂದಾದರೂ ಭರತನು ಅಪ್ರಿಯವಾದ ಕೆಲಸವನ್ನು ನಡೆಸಿರುವುದನ್ನು ನೀನು ಕಂಡಿರುವೆಯೂ? ಭ್ರಾತೃವಧೆಯಿಂದ ಸಂಪಾದಿಸಿದ ರಾಜ್ಯದಿಂದೇನಾಗಬೇಕು? ನಾನು ಈ ರಾಜ್ಯವನ್ನು ಅಪೇಕ್ಷಿಸುವುದೂ ನಿಮ್ಮಗಳಿಗಾಗಿ. ಭರತನು ನಮಗಾದ ತೊಂದರೆಗೆ ಮರುಗಿ ತಾಯಿಯನ್ನು ನಿಂದಿಸಿ, ತಂದೆಯನ್ನು ಒಪ್ಪಿಸಿ ನಮ್ಮನ್ನು ಹಿಂದಕ್ಕೆ ಕರೆದುಕೊಂಡು ಹೋಗಲು ಬಂದಿರುವನೆಂದು ಭಾವಿಸುತ್ತೇನೆ. ನೀನು ರಾಜ್ಯಲೋಭದಿಂದ ಈ ತೆರನಾದ ಮಾತುಗಳನ್ನಾಡಿದ್ದರೆ ಭರತನು ಬಂದ ತಕ್ಷಣ ನಿನಗೆ ರಾಜ್ಯವನ್ನು ಬಿಟ್ಟುಕೊಡು ಎಂದು ಹೇಳುತ್ತೇನೆ. ಅವನು ಸಂತೋಷದಿಂದ ಹಾಗೆ ಮಾಡುತ್ತಾನೆ" ಈ ಮಾತುಗಳನ್ನು ಕೇಳಿದ ತಕ್ಷಣ ಲಕ್ಷ್ಮಣನಿಗೆ ತನ್ನ ಶರೀರದಲ್ಲಿಯೇ ತಾನು ಅಡಗಿಕೊಂಡಷ್ಟು ಲಜ್ಜೆಯಾಯಿತು.

ಲಕ್ಷ್ಮಣನು ಕೆಲವು ಸಲ ಶೀಘ್ರಕೋಪಿಯಾಗಿ ವಿವೇಕವಿಲ್ಲದಂತೆ ಮಾತನಾಡಿದರೂ ಸೂಕ್ತ ಸಂದರ್ಭಗಳಲ್ಲಿ ಬಹುಸೂಕ್ತವಾದ ಸೂಚನೆ

ಗಳನ್ನು ಕೊಡುತ್ತಾನೆ. ಮಾಯಾಮೃಗ ರೂಪದಲ್ಲಿ ಮಾರೀಚನು ಕಾಣಿಸಿಕೊಂಡಾಗ ಅದು ಮಾರೀಚನ ಮಾಯೆಯೆಂದು ಸ್ಪಷ್ಟವಾಗಿ ತಿಳಿಸಿದನು. ಅಂತಹ ಮೃಗವು ಪ್ರಪಂಚದಲ್ಲೇ ಇರಲು ಸಾಧ್ಯವಿಲ್ಲವೆಂದು ಸೇಡುತೀರಿಸಿಕೊಳ್ಳಲು ರಾಕ್ಷಸರು ಹೂಡಿರುವ ಸಂಚೆಂದೂ ಎಚ್ಚರಿಸಿದನು. ಅವನ ಮಾತಿಗೆ ಗಮನ ಕೊಡದಿರಲು ಸೀತಾಪಹರಣದ ದುರಂತವು ಪ್ರಾಪ್ತವಾಯಿತು.

ಸೀತಾಪಹರಣ ಸಂದರ್ಭದಲ್ಲಿ ಲಕ್ಷ್ಮಣನು ಪ್ರದರ್ಶಿಸಿದ ಸಂಯಮವೂ ಅವನ ಹೃದಯ ವೇದನೆಯೂ ಅವರ್ಣನೀಯವಾದುವು. ಮೃಗವನ್ನು ಅಟ್ಟಿಕೊಂಡು ಹೋಗುವ ಮೊದಲು ರಾಮನು ಸೀತೆಯನ್ನು ಲಕ್ಷ್ಮಣನಲ್ಲಿ ನ್ಯಾಸವಾಗಿಟ್ಟು ಹೋದನು. ಅವಳ ರಕ್ಷಣೆಯ ಭಾರವು ಅವನಿಗೆ ಸೇರಿದುದಾಗಿತ್ತು. ಆದರೆ ಮಾಯಾವಿಯಾದ ಮಾರೀಚನ ಆರ್ತಧ್ವನಿಯಿಂದ ಸೀತೆಗೆ ಉದ್ವೇಗವುಂಟಾಯಿತು. ಲಕ್ಷ್ಮಣನನ್ನು ರಾಮನ ಸಹಾಯಕ್ಕೆ ಹೋಗಬೇಕೆಂದು ಒತ್ತಾಯಿಸಿದಳು. ಒಂದು ಕಡೆ ಅಣ್ಣನ ಆಜ್ಞೆ. ಮತ್ತೊಂದು ಕಡೆ ಅತ್ತಿಗೆಯ ನಿಷ್ಠುರದ ನುಡಿ; ಸೀತೆಯಲ್ಲಿ ಲಕ್ಷ್ಮಣನಿಗೆ ವಿಶೇಷ ಭಕ್ತಿ, ಒಂದುಸಲವೂ ಅವನು ಸೀತೆಯನ್ನು ತಲೆಯೆತ್ತಿ ನೋಡಿದವನಲ್ಲ. ರಾಮನು ಋಶ್ಯಮೂಕಪರ್ವತದಲ್ಲಿ ಸುಗ್ರೀವನನ್ನು ತೋರಿಸಿದ ಆಭರಣಗಳನ್ನು ಲಕ್ಷ್ಮಣನಿಗೆ ಗುರುತಿಸ ಹೇಳಿದಾಗ 'ನಾ ಹಂ ಜಾನಾಮಿ ಕೇಯೂರೇ ನಾ ಹಂ ಜಾನಾಮಿ ಕುಂಡಲೇ । ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್' (ನನಗೆ ಕೇಯೂರ ಕುಂಡಲಗಳು ತಿಳಿಯದು. ಪ್ರತಿದಿನವೂ ನಮಸ್ಕಾರ ಮಾಡುತ್ತಿದ್ದುದರಿಂದ ಕಾಲಂದಿಗೆ ಮಾತ್ರ ಪರಿಚಯವುಂಟು) ಎಂದು ಹೇಳಿದ. ಅಂತಹ ಲಕ್ಷ್ಮಣನ ವಿಚಾರದಲ್ಲಿ ಸೀತೆಯಾಡಿದ ಮಾತುಗಳು ಬಹು ಕಠೋರವಾದುವು. ಗತ್ಯಂತರವಿಲ್ಲದೆ ಸೀತೆಯನ್ನು ಬಿಟ್ಟು ರಾಮನಲ್ಲಿಗೆ ಹೋದ. ಅಲ್ಲಿಯೂ ರಾಮನಿಂದ ತಿರಸ್ಕಾರವೇ. ಹೆಂಗಸಿನ ನಿಷ್ಠುರದ ನುಡಿಯಿಂದ ಕೋಪಗೊಂಡು ಸೀತೆಯನ್ನು ಬಿಟ್ಟು ಬಂದುದು ಸರ್ವಥಾ ಅನುಚಿತವೆಂದು ರಾಮನು ಲಕ್ಷ್ಮಣನನ್ನು ಖಂಡಿಸಿದ.

ಮುಂದೆ ರಾಮನನ್ನು ಸಂತೈಸಿ ಸೀತಾನ್ವೇಷಣ ಮಾಡುವ ಜವಾಬ್ದಾರಿಯೂ ಲಕ್ಷ್ಮಣನಮೇಲೆಯೇ ಬಿತ್ತು. ಅವನೊಡನೆ ಕಾಡುಮೇಡುಗಳಲ್ಲಲೆದು ವಿರಹದಿಂದ ಉನ್ಮತ್ತನಾದ ರಾಮನನ್ನು ಸಮಾಧಾನಗೊಳಿಸಿ ಅವನ ಮಹತ್ವವನ್ನು ಪರಾಕ್ರಮವನ್ನು ಹೆಜ್ಜೆ ಹೆಜ್ಜೆಗೂ ಜ್ಞಾಪಿಸಿದ. ಲಕ್ಷ್ಮಣನ ಸಮಾಧಾನದ ನುಡಿಯನ್ನು ಲಕ್ಷಿಸದೆ ರಾಮನು 'ಹಾ ಸೀತೆ' ಎಂದು ಹಲುಬಲು ಪ್ರಾರಂಭಿಸಿದ. ಆಗ ಧರ್ಮಜ್ಞನೂ ಪ್ರಾಜ್ಞನೂ ಆದ ಲಕ್ಷ್ಮಣನು ಕೃತಾಂಜಲಿಯಾಗಿ ರಾಮನನ್ನು ಕುರಿತು 'ಶೋಕಂ ವಿಮುಂಚಾರ್ಯ ಧೃತಿಂ ಭಜಸ್ವ ಸೋತ್ಸಾಹತಾ ಚಾಸ್ತು ವಿಮಾರ್ಗಣೇಸ್ಯಾಃ ಉತ್ಸಾಹವಂತಃ ಪುರುಷಾಃ ನಾವಸೀದಂತಿ ಕರ್ಮಸು' (ಪೂಜ್ಯನೇ, ಶೋಕವನ್ನು ಬಿಡು, ಧೈರ್ಯವಂತನಾಗು, ಉತ್ಸಾಹದಿಂದ ಹುಡುಕೋಣ, ಉತ್ಸಾಹ ಶಾಲಿಗಳಾದವರು ಯಾವ ಕಷ್ಟಕಾರ್ಯದಲ್ಲಿಯೂ ವಿಫಲರಾಗುವುದಿಲ್ಲ) ಎಂದು ಬೇಡಿಕೊಂಡ. ರಾಮನ ವಿರಹಾವಸ್ಥೆ ಉಲ್ಬಣಾವಸ್ಥೆಗೆ ಬಂದಿತು. ರಾಮನು ಸೀತೆಯು ಸಿಕ್ಕದಿದ್ದರೆ ಮೂರು ಲೋಕದ ಚರಾಚರಗಳನ್ನು ನಾಶಮಾಡಿ ಬಿಡುತ್ತೇನೆಂದು ವಿಜೃಂಭಿಸಿದ. ಆಗ ಲಕ್ಷ್ಮಣನು ರಾಮನ ಅದೃಷ್ಟಪೂರ್ವವಾದ ಆ ಕ್ರೋಧವನ್ನು ನೋಡಿ ಅಂಜಲೀಬದ್ಧನಾಗಿ ಪ್ರಾರ್ಥಿಸಿದ. 'ರಾಮ, ಒಬ್ಬನ ಅಪರಾಧಕ್ಕಾಗಿ ಪ್ರಪಂಚವನ್ನೇ ನಾಶಮಾಡುವೆನೆಂಬುದು ನ್ಯಾಯವಲ್ಲ. ನೀನು ಸರ್ವಲೋಕ ಶರಣ್ಯ, ನಾನೂ ನೀನೂ ಸಮುದ್ರಗಿರಿ ಗಹ್ವರಗಳನ್ನೆಲ್ಲ ಹುಡುಕೋಣ. ಸರ್ವಥಾ ಸೀತೆ ಸಿಕ್ಕದಿದ್ದರೆ ಮುಂದಿನ ಕಾರ್ಯವನ್ನು ಯೋಚಿಸೋಣ' ಎಂದು ಸಮಾಧಾನ ಪಡಿಸಿದನು.

ಮುಂದೆ ಪಂಪಾಸರೋವರವನ್ನು ಸೇರಿದಾಗಲೂ ರಾಮನು ಇದೇರೀತಿಯಲ್ಲಿ ವಿರಹದಿಂದ ಆಕ್ರಂದನಮಾಡಿದನು. ಆಗಲೂ ಲಕ್ಷ್ಮಣನು ರಾಮನನ್ನು ಕುರಿತು 'ಅಣ್ಣಾ ನಿಮ್ಮಂತಹವರೇ ಈ ರೀತಿಯಲ್ಲಿ ದುಃಖಪಟ್ಟರೆ ಪ್ರಾಕೃತರ ವಿಷಯದಲ್ಲಿ ಹೇಳುವುದೇನು? ನೀನು ಮಹಾಪ್ರಾಜ್ಞ, ನಿನ್ನ ಪ್ರಜ್ಞೆಗೆ ಸಮಾನವಾದ ಜ್ಞಾನ ದೇವತೆಗಳಿಗೂ ಅಲಭ್ಯ. ನಿನ್ನಂತಹ ಬುದ್ಧಿವಂತನು ಆಪತ್ತಿ ಈ ರೀತಿ ತತ್ತರಿಸಬಾರದು' ಎಂದು ಎಚ್ಚರಿಸಿ

ಋಶ್ಯ ಮೂಕದಲ್ಲಿ ಹನುಮಂತನು ರಾಮ ಸಖ್ಯಕ್ಕಾಗಿ ಬಂದು ಯಾಚಿಸಿದ. ಆಗ ಲಕ್ಷ್ಮಣ ರಾಮನು ಸುಗ್ರೀವನಿಗೆ ಶರಣಾದುದನ್ನು ರಾಮ ಘನತೆಗೆ ಕುಂದು ಬರದಂತೆ ಬಹು ಉಚ್ಚಮಟ್ಟ ತಿಳಿಸುತ್ತಾನೆ. 'ಶ್ರೀರಾಮನು ಅರ್ಥಿಗಳಿಗೆ ಬೇ ದಷ್ಟು ಧನವನ್ನು ಕೊಟ್ಟು ಪೋಷಿಸಿದವ ಲೋಕೋತ್ತರವಾದ ಕೀರ್ತಿಯನ್ನು ಪಡೆದವ ಹಿಂದೆ ಲೋಕನಾಥನೆನಿಸಿ ಕೊಂಡವನು. ಈ ಸುಗ್ರೀವನನ್ನು ನಾಥನನ್ನಾಗಿ ಬಯಸುತ್ತಿದ್ದಾ ಯಾರ ತಂದೆಯು ಶರಣಾಗತರ ರಕ್ಷಕನಾ ಧರ್ಮವತ್ಸಲನೆನಿಸಿ ಕೊಂಡಿದ್ದನೋ ಆತ ಪುತ್ರನೀತನು. ಸರ್ವಲೋಕ ಶರಣ್ಯನಾದ ಇವ ಸುಗ್ರೀವನಿಗೆ ಶರಣಾಗತನಾಗಿದ್ದಾನೆ. ಧರ್ಮಾ ನಾಗಿ ಸಕಲ ಜನರಿಗೆ ಆಶ್ರಯದಾತನೂ ಭಯ ತ್ರಾತನೂ ಆದ ನನ್ನ ಗುರುವಾದ ರಘುಕು ತಿಲಕನು ಸುಗ್ರೀವನಿಗೆ ಶರಣಾಗತನಾಗಿದ್ದಾನೆ. ಈ ಮಾತುಗಳನ್ನು ಕೇಳಿ ಆಂಜನೇಯನು ಶ್ರೀ ರಾಮನ ಮಹಾತ್ಮ್ಯವನ್ನರಿತನು. ಸುಗ್ರೀವಸಖ್ಯ ವಾಲಿವಧೆ ಮತ್ತು ಸುಗ್ರೀವ ಪಟ್ಟಾಭಿಷೇಕಗಳ ದುವು. ಸೀತಾನ್ವೇಷಣಕ್ಕೆ ಶರತ್ಕಾಲದ ವರೆಗೆ ಗಡುವು ನಿಶ್ಚಯವಾಯಿತು. ಆ ಕಾಲವನ್ನು ಕ ಯಲು ರಾಮಲಕ್ಷ್ಮಣರು ಋಶ್ಯಮೂಕದ ಗುಹ ಯೊಂದನ್ನಾಶ್ರಯಿಸಿದರು.

ಶರತ್ಕಾಲವೂ ಪ್ರಾಪ್ತವಾಯಿತು. ಕಾಮಾ ಸಕ್ತನಾದ ಸುಗ್ರೀವನು ಸೀತಾನ್ವೇಷಣಕಾರ್ಯ ದಲ್ಲಿ ಆಸಕ್ತನಾಗಲಿಲ್ಲ. ರಾಮನ ವಿರಹವೋ ಅಸಹನವಾಯಿತು. ರಾಮನು ಸುಗ್ರೀವನನ್ನು ಎಚ್ಚರಿಸಲು ಲಕ್ಷ್ಮಣನನ್ನು ಕಳುಹಿಸಿದನು. ರಾಮನ ದುರವಸ್ಥೆಯನ್ನು ಕಣ್ಣಾರೆ ಕಂಡ ಲಕ್ಷ್ಮಣನು ಕೋಪಾವೇಶದಿಂದ ಕೂಡಿ ಕಿಷ್ಕಿಂಧೆಗೆ ಹೊರಟನು. ಹೊರಡುವಾಗ ರಾಮನು ಲಕ್ಷ್ಮಣನಿಗೆ ಕೋಪಿಸಬಾರದೆಂದೂ ಸಮಾಧಾನಚಿತ್ತದಿಂದ ಸುಗ್ರೀವನನ್ನು ಕಾಣಬೇಕೆಂದೂ ಎಚ್ಚರಿಸಿದನು. ಆದರೂ ಲಕ್ಷ್ಮಣನು ಅದನ್ನು ಲಕ್ಷಿಸದೆ ವೀರಾವೇಶದಿಂದ ಕಿಷ್ಕಿಂಧೆಗೆ ಹೋಗಿ ಅಂಗದನ ಮೂಲಕ ತನ್ನ ಬರವನ್ನು ಸುಗ್ರೀವನಿಗೆ ತಿಳಿಯಪಡಿಸಿದನು. ಈ ಸಂದರ್ಭದಲ್ಲಿ ಲಕ್ಷ್ಮಣನು ಪ್ರದರ್ಶಿಸುವ ಚಲನವಲನಗಳು ಅವನ ಮನೋಧರ್ಮದ ವಿವಿಧ ಮುಖಗಳನ್ನು ಪ್ರದರ್ಶಿಸುತ್ತವೆ. ಅಂಗದನು ಲಕ್ಷ್ಮಣನ ಆಗಮನವನ್ನು ತಿಳಿಯಪಡಿಸುವುದಕ್ಕಿಂತ ಮುಂಚೆಯೇ ಸುಗ್ರೀವನು ಸೀತಾನ್ವೇಷಣ ಕಾರ್ಯವನ್ನು ಪ್ರಾರಂಭಿಸಿದ್ದನು. ಆದುದರಿಂದ ಸ್ವಭಾವತಃ ಮೃದುಸ್ವಭಾವನಾದ ಲಕ್ಷ್ಮಣನು ಕೋಪಿಸಿಕೊಂಡಿರುವುದಕ್ಕೆ ಸುಗ್ರೀವನಿಗೆ ಕಾರಣ ತಿಳಿಯಲಿಲ್ಲ. ಆದರೂ ಶುದ್ಧ

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

ಸತ್ವಸಾದ ಲಕ್ಷ್ಮಣನು ಸ್ತ್ರೀಯರ ಮೇಲೆ ಕೋಪಿಸಿಕೊಳ್ಳಲಾರನೆಂದು ಭಾವಿಸಿ ಅವನನ್ನು ಸಮಾಧಾನ ಪಡಿಸಲು ತನ್ನ ಪತ್ನಿಯಾದ ತಾರೆಯನು ಕಳುಹಿಸಿ ಲಕ್ಷ್ಮಣನಿಗೆ ತನ್ನಲ್ಲಿಗೆ ಬರಲು ಹೇಳಿ ಕಳುಹಿಸಿದನು. ಲಕ್ಷ್ಮಣನು ಬಹು ಕೋಪಾವಿಷ್ಟನಾಗಿ ತನ್ನ ಚಾರಿತ್ರ್ಯಕ್ಕೆ ಲೋಪ ಬರುವುದೆಂದು ಭಾವಿಸಿ ಅಂತಃಪುರದ ಹೊರಗೆ ನಿಂತನು. ತಾರೆಯನ್ನೂ ಕಂಡ ತಕ್ಷಣ ಕಾಮಾಸಕ್ತನಾದ ಅವಳ ಪತಿಯಾದ ಸುಗ್ರೀವನು ಧರ್ಮಾರ್ಥ ಕಾಮಗಳಿಗೆ ವಿರುದ್ಧವಾದ ಕಾರ್ಯವನ್ನು ಮಾಡಿ ಮಿತ್ರದ್ರೋಹವನ್ನೆಸಗಿದನೆಂದು ಆಕ್ಷೇಪಿಸಿದನು. ತಾರೆಯು ಬಹಳ ಬುದ್ಧಿವಂತೆ. ಅವಳನ್ನು ನೋಡಿದತಕ್ಷಣವೇ ಲಕ್ಷ್ಮಣನಿಗೆ ಅರ್ಧ ಕೋಪವಿಳಿಯಿತು. ಅವಳ ಅನುನಯವಾದ ಮಾತುಗಳಿಂದ ಕೋಪವು ಸಂಪೂರ್ಣವಾಗಿ ಮಾಯವಾಯಿತು. ಅವಳ ಆಹ್ವಾನದ ಮೇಲೆ ಅಂತಃಪುರಕ್ಕೆ ಹೋಗಿ ರುಮಾಸಹಿತನಾಗಿದ್ದ ಸುಗ್ರೀವನನ್ನು ನೋಡಿ 'ವಾಲಿಯು ಹೋದ ಮಾರ್ಗ ಸಂಕುಚಿತವಾಗಿಲ್ಲ; ಅಮಾರ್ಗದಲ್ಲಿ ನಡೆಯಲು ಯತ್ನಿಸಬೇಡ.ಒಪ್ಪಂದದಂತೆ ನಡೆದುಕೊ!' ಎಂದು ಬುದ್ಧಿವಾದವನ್ನು ಹೇಳಿದನು. ಅನ್ವೇಷಣ ಕಾರ್ಯ ಈಗಾಗಲೇ ಪ್ರಾರಂಭವಾಗಿದೆಯೆಂದು ತಿಳಿದು ಅಣ್ಣನ ಸ್ಥಿತಿಯಿಂದ ಉದ್ರಿಕ್ತನಾಗಿ ತಾನಾಡಿದ ಕಠೋರವಾದ ಮಾತನ್ನು ಕ್ಷಮಿಸಬೇಕೆಂದು ಸುಗ್ರೀವನನ್ನು ಕೇಳಿ ಕೊಂಡನು. ಅಲ್ಲದೆ ಸುಗ್ರೀವನು ಅಣ್ಣನಿಗೆ ತಕ್ಷಣ ಸಮಾಧಾನ ಮಾಡಬೇಕೆಂದು ಪ್ರಾರ್ಥಿಸಿದನು. ರಾಮನಲ್ಲಿಗೆ ಹೋಗಲು ಸುಗ್ರೀವನು ಪಲ್ಲಕ್ಕಿಯನ್ನೂ ತರಿಸಿದನು. ಲಕ್ಷ್ಮಣ ಸುಗ್ರೀವರು ಪಲ್ಲಕ್ಕಿಯಲ್ಲಿ ಕುಳಿತು ರಾಮನಿದ್ದೆಡೆ ಹೋದರು. ಅವನೆದುರಿಗೆ ಲಕ್ಷ್ಮಣನು ಸುಗ್ರೀವನು ಪರಮೋತ್ತಮನಾದ ಮಿತ್ರನೆಂದು ಪ್ರಶಂಸಿಸಿದನು.

ಸುಂದರಕಾಂಡದಲ್ಲಿ ಸೀತಾದೇವಿಯು ಹನುಮಂತನಿಂದ ರಾಮ ಲಕ್ಷ್ಮಣರ ವಿಚಾರವನ್ನು ತಿಳಿದು ಅವರಿಗೆ ಪ್ರತಿಸಂದೇಶವನ್ನು ಕಳುಹಿಸುವಾಗ ಲಕ್ಷ್ಮಣನ ಗುಣಗಾನವನ್ನು ಈ ರೀತಿ ಮಾಡುತ್ತಾಳೆ. 'ಲಕ್ಷ್ಮಣನು ಸುಮಿತ್ರಾ ದೇವಿಯ ಸುಕುಮಾರ, ಅವನು ಹೂಮಾಲೆಗಳು, ರತ್ನಗಳು, ಉತ್ತಮ ಸ್ತ್ರೀಯರು,ಇನ್ನೆಲ್ಲಿಯೂ ದೊರೆಯದಷ್ಟು ಐಶ್ವರ್ಯ–ಇವೆಲ್ಲವನ್ನು ತೊರೆದು ತಂದೆತಾಯಿಗಳನ್ನೊಪ್ಪಿಸಿ ಅಣ್ಣನ ಹಿಂದೆಯೇ ಬಂದುಬಿಟ್ಟನು. ಆ ಧರ್ಮಾತ್ಮನು ಉತ್ತಮವಾದ ಸುಖವನ್ನು ತ್ಯಜಿಸಿ ಕಾಡಿನಲ್ಲಿ ಅಣ್ಣನಿಗೆ ಬೆಂಬಲವಾಗಿದ್ದನು. ಅವನಿಗೆ ಸಿಂಹದಂತಹ ಹೆಗಲು, ಆಜಾನುಬಾಹು, ಧೀರ, ನೋಡಿದರೆ ಆನಂದವಾಗುವುದು. ರಾಮನನ್ನು ತಂದೆಯೆಂದೂ ನನ್ನನ್ನು ತಾಯಿಯೆಂದೂ ತಿಳಿದು ಕೊಂಡಿದ್ದಾನೆ. ರಾವಣನು ನನ್ನನ್ನು ಅಪಹರಿಸಿದುದು ಆ ವೀರನಿಗೆ ಗೊತ್ತಾಗದೇ ಹೋಯಿತು. ಲಕ್ಷ್ಮಣನು ಹಿರಿಯರ ಸೇವಕ, ಸಮರ್ಥ, ಹೆಚ್ಚುಮಾತನಾಡುವವನಲ್ಲ. ನನ್ನ ಮಾವನಿಗೆ ಪ್ರಿಯನಾದ ಪುತ್ರ. ಅವನಿಗೆ ತಕ್ಕ ಮಗ, ರಾಮನಿಗೆ ಲಕ್ಷ್ಮಣನೆಂದರೆ ನನ್ನಮೇಲಿರುವುದಕ್ಕಿಂತ ಹೆಚ್ಚಿನ ಪ್ರೀತಿ. ಯಾವಕಾರ್ಯವನ್ನು ವಹಿಸಿದರೂ ನಡಸಬಲ್ಲದಕ್ಷ. ರಾಮನು ಅವನನ್ನು ಕಂಡು ಮೃತನಾದ ತಂದೆಯನ್ನು ಸ್ಮರಿಸಿಕೊಂಡು ದುಃಖಿಸದೇ ಇದ್ದನು. ಲಕ್ಷ್ಮಣನು ಮೃದು ಸ್ವಭಾವದವನು, ಶುದ್ಧಾತ್ಮನಾದವನು, ಕಾರ್ಯದಕ್ಷ.

ಯುದ್ಧರಂಗದಲ್ಲಿ ಲಕ್ಷ್ಮಣನ ಸಾಹಸ ಅನ್ಯಾದೃಶವಾದದು. ಅಣ್ಣನಿಗೆ ಹೊಯ್‌ಕೈಯಾಗಿದ್ದು ತನ್ನ ಅಸಮ ಸಾಹಸವನ್ನೂ ಪ್ರದರ್ಶಿಸಿದನು. ರಾವಣನಿಗೆ ಎರಡು ಭುಜಗಳಂತಿದ್ದ ಅವನ ಮಕ್ಕಳಾದ ಅತಿಕಾಯ ಮತ್ತು ಇಂದ್ರಜಿತುಗಳನ್ನು ಸಂಹಾರಮಾಡಿದವನು ಲಕ್ಷ್ಮಣನೇ. ಅವರಿಬ್ಬರನ್ನೂ ಸಂಹರಿಸದಿದ್ದರೆ ರಾವಣನನ್ನು ಜಯಿಸುವುದು ಅಸಾಧ್ಯವಾಗಿತ್ತು. ಅತಿಕಾಯನು ಲಕ್ಷ್ಮಣನನ್ನು ಬಾಲಕನೆಂದು ಅಪಹಾಸ್ಯಮಾಡಿದ್ದನು. ಇಂದ್ರಜಿತುವು ಮಾಯಾಯುದ್ಧದಲ್ಲಿ ನಿಪುಣ. ಲಕ್ಷ್ಮಣನು ಅತಿಕಾಯನನ್ನು ಬ್ರಹ್ಮಾಸ್ತ್ರದಿಂದ ಕೊಂದು ಹಾಕಿದನು. ಇಂದ್ರಜಿತುವು ನಿಕುಂಭಿಲಾಯಾಗವನ್ನು ಮುಗಿಸಿ ಶಕ್ತಿಯುಕ್ತನಾಗುವುದಕ್ಕೆ ಮುಂಚೆಯೇ ಅವನೊಡನೆ ಘೋರ ಸಂಗ್ರಾಮವನ್ನು ನಡೆಸಿ ಅವನನ್ನು ಗೆಲ್ಲವುದು ಕಷ್ಟಸಾಧ್ಯವೆಂದು ತಿಳಿದಾಗ 'ಧರ್ಮಾತ್ಮಾಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ ಪೌರುಷೇ ಚಾಪ್ರತಿದ್ವಂದ್ವಃಶರೈಸಂ ಜಹಿ ರಾವಣಿಂ'ಎಂದು ರಾಮನ ಮೇಲೆಯೇ ಆಣೆಯಿಟ್ಟು ಬಾಣಪ್ರಯೋಗ ಮಾಡಿ ಅವನ ಶರೀರವನ್ನು ನೆಲಕ್ಕುರುಳಿಸಿದರು.

ರಾಮನಿಗೆ ಲಕ್ಷ್ಮಣನಲ್ಲಿ ಅಸಾಧಾರಣವಾದ ಪ್ರೀತಿ. ಅವನು ತನಗೆ ತಂದೆಯಸ್ಥಾನದಲ್ಲಿದ್ದಾನೆಂದೂ, ಅವನಿದ್ದುದು ಸೀತಾದೇವಿಯ ರಕ್ಷಣೆಗೆ ಸಹಾಯವಾಯಿತೆಂದೂ ಸೀತಾಲಕ್ಷ್ಮಣರಿಬ್ಬರೂ ಜೊತೆಯಲ್ಲಿದ್ದರೆ ತನಗೆ ಸ್ವರ್ಗವಾಸವೂ ಬೇಡವೆನಿಸುತ್ತದೆಂದೂ ಮುಕ್ತಕಂಠದಿಂದ ಹೊಗಳಿದ್ದಾನೆ. ಯುದ್ಧಾಂತ್ಯದಲ್ಲಿ ರಾವಣನ ಶಕ್ತ್ಯಾಯುಧದಿಂದ ಲಕ್ಷ್ಮಣನು ಮೂರ್ಛೆ ಹೋಗುತ್ತಾನೆ. ರಾಮನಿಗೆ ಅಪಾರವಾದ ದುಃಖವುಂಟಾಗುತ್ತದೆ. ಆಗ ರಾಮನು 'ದೇಶೇ ದೇಶೇ ಕಳತ್ರಾಣಿ ದೇಶೇ ದೇಶೇಚಬಾಂಧವಾಃ ತಂತು ದೇಶಂ ನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ' ಎಂದು ಮರುಗಿ 'ಇನ್ನು ನನಗೆ ಸೀತೆಯಿಂದೇನಾಗಬೇಕು, ಯುದ್ಧವಾದರೂ ಏಕೆ' ಎಂದು ಉತ್ಸಾಹಶೂನ್ಯನಾಗುತ್ತಾನೆ. ಸಂಜೀವಿನಿ ಔಷಧಿಗಳ ಪ್ರಯೋಗದಿಂದ ಲಕ್ಷ್ಮಣನು ಜೀವಂತನಾಗಿ ರಾಮನ ನಿರುತ್ಸಾಹವನ್ನು ಕಂಡು ಅವನು ತನ್ನ ಪ್ರತಿಜ್ಞೆಯನ್ನೂ ಪಾಲನೆ ಮಾಡಬೇಕೆಂದು ಪ್ರೋತ್ಸಾಹಿಸುತ್ತಾನೆ.

ರಾವಣವಧೆಯಾದ ಮೇಲೆ ರಾಮನ ಆಜ್ಞೆಯ ಪ್ರಕಾರ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿಷೇಕವನ್ನು ನಡಸುವವನೂ ಲಕ್ಷ್ಮಣನೆ. ಸೀತೆಯ ಅಗ್ನಿಪ್ರವೇಶಕಾಲದಲ್ಲಿ ರಾಮನ ಇಂಗಿತದ ಪ್ರಕಾರ ಅವಳಿಗೆ ಚಿತೆಯನ್ನೂ ಏರ್ಪಡಿಸಿ ಅವಳ ಪಾರಿಶುದ್ಧ್ಯಪ್ರದರ್ಶನಕ್ಕೆ ಪರೋಕ್ಷವಾಗಿ ಕಾರಣನಾಗುತ್ತಾನೆ. ಇಂದ್ರಲೋಕದಿಂದ ಬಂದಿದ್ದ ಅವನ ತಂದೆಯಾದ ದಶರಥನು ಲಕ್ಷ್ಮಣನು ರಾಮನಲ್ಲಿಟ್ಟಿದ್ದ ಭಕ್ತಿ ವಿಶ್ವಾಸಗಳಿಗಾಗಿ ಶ್ಲಾಘಿಸಿ ಅವರು ಮುಂದೆಯೂ ಹಾಗೆಯೇ ಇರಬೇಕೆಂದೂ ಆಶೀರ್ವದಿಸುವನು.

ಲಕ್ಷ್ಮಣನ ಕೈಂಕರ್ಯಲಕ್ಷ್ಮಿಯ ಪರಾಕಾಷ್ಠೆಯನ್ನು ಕಾಣುವುದು ರಾಮನ ಪಟ್ಟಾಭಿಷೇಕವಾದ ಮೇಲೆ, ರಾಮನಪಟ್ಟಾಭಿಷೇಕವು ಅತಿ ವೈಭವದಿಂದ ನಡೆಯುವುದು–ಬಂದವರಿಗೆಲ್ಲ ಅವರವರ ಯೋಗ್ಯತಾನುಸಾರ ಉಡುಗೊರೆಯ ವಿನಿಯೋಗವಾಗುವುದು. ಆಗ ಧರ್ಮಶೀಲನಾದ ರಾಮನು ಧರ್ಮಜ್ಞನಾದ ಲಕ್ಷ್ಮಣನನ್ನು ನೋಡಿ 'ವತ್ಸ ಲಕ್ಷ್ಮಣ ಈ ರಾಜ್ಯವು ನಮ್ಮ ಪೂರ್ವಿಕರಿಂದ ಆಳಲ್ಪಡುತ್ತಿದೆ. ಇದರ ಆಡಳಿತದಲ್ಲಿ ನೀನು ನನಗೆ ನೆರವಾಗು. ಶೌರ್ಯದಲ್ಲಿ ನೀನು ನನಗೆ ಸಮಾನವಾಗಿದ್ದೀಯೆ; ಆದ್ದರಿಂದ ಲಕ್ಷ್ಮಣ, ನೀನು ಯುವರಾಜ ಪದವಿಯನ್ನು ಸ್ವೀಕರಿಸು" ಎಂದನು. ಎಷ್ಟು ಅನುನಯದಿಂದ ಹೇಳಿದರೂ ಯುವರಾಜನಾಗಲು ಲಕ್ಷ್ಮಣನು ಒಪ್ಪದಿರಲು ಶ್ರೀರಾಮನು ಭರತನಿಗೆ ಯುವರಾಜಪದವಿಯನ್ನಿತ್ತನು.

ಲಕ್ಷ್ಮಣನಿಗೆ ಬೇಕಾಗಿದ್ದುದು ರಾಜಲಕ್ಷ್ಮಿಯಲ್ಲ, ಕೈಂಕರ್ಯ ಲಕ್ಷ್ಮಿ. ಆದಕ್ಕಾಗಿಯೇ ಅವನು ಅಯೋಧ್ಯೆಗೆ ಹಿಂತಿರುಗಿದಾಗ ಕೈಕೇಯಿಯು ವನವಾಸದ ಅವಧಿಯನ್ನೂ ೧೪ ವರ್ಷಗಳಿಗೆ ಸೀಮಿತಗೊಳಿಸಿದಳಲ್ಲ. ಅದರಿಂದ ನನ್ನ ಕೈಂಕರ್ಯ ಭಾಗ್ಯದ ಅವಧಿಯು ಕುಂಠಿತವಾಯಿತಲ್ಲ ಎಂದು ಉದ್ಗಾರ ತೆಗೆಯುವನು. ಆ ಭಾಗ್ಯವನ್ನೂ ನಿತ್ಯವಾಗಿ ಪಡೆದಿದ್ದ ಲಕ್ಷ್ಮಣನನ್ನು ಭರತನೂ ಪೌರರೂ ಭಾಗ್ಯಶಾಲಿಯೆಂದು ಕೊಂಡಾಡಿದರು.

ಲಕ್ಷ್ಮಣನು ಮೊದಲಿಂದ ಕೊನೆಯವರೆಗೆ ತನ್ನ ಕೈಂಕರ್ಯವೃತ್ತಿಯನ್ನು ಬಹುನಿಷ್ಕೃಷ್ಟವಾಗಿ ನಡೆಸಿ ಕೊಂಡು ಬಂದು ಉಚ್ಚ ಆದರ್ಶ ಮೂರ್ತಿಯಾಗಿದ್ದಾನೆ. ರಾಮಾವತಾರಕೃತ್ಯವನ್ನು ಪೂರ್ಣಗೊಳಿಸುವುದರಲ್ಲಿ ಅತ್ಯಂತ ಸಹಾಯಕನಾಗಿದ್ದಾನೆ.

ಲಕ್ಷ್ಮಣನು ಆದಿಶೇಷನ ಅವತಾರವೆಂದು ಆಸ್ತಿಕರೆಲ್ಲ ನಂಬಿದ್ದಾರೆ. ಅದಕ್ಕನುಗುಣವಾಗಿ ಶೇಷಶಾಯಿಗೆ ಶೇಷನು ಎಡಬಿಡದೆ ಕೈಂಕರ್ಯ ನಡೆಸುವಂತೆ ಲಕ್ಷ್ಮಣನು ಶ್ರೀರಾಮನಿಗೆ ಕೈಂಕರ್ಯವನ್ನು ಮಾಡಿ ತನ್ನ ಅವತಾರವನ್ನು ಸಾರ್ಥಕಗೊಳಿಸಿದ್ದಾನೆ.

## ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕವಸತಿಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ.

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

**ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ. ತಿರುಪತಿ**

## ಕ್ಯೂ ಕಾಂಪ್ಲೆಕ್ಸ್‌ನಲ್ಲಿ ಟಿ. ವಿ.

ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿ ಆಲಯದ ಕ್ಯೂಕಾಂಪ್ಲೆಕ್ಸ್‌ನ ಎಲ್ಲ ಕೋಣೆಗಳಲ್ಲೂ ಬಣ್ಣದ ಟಿ. ವಿ. ಗಳನ್ನಿಟ್ಟು ತಿರುಮಲೆಯ ಸದಸ್ ಹಾಲಿನಲ್ಲಿ ನಡೆಯುವ ಕಾರ್ಯಕ್ರಮಗಳನ್ನು ನೋಡಲು ಅನುಕೂಲ ಮಾಡಲಾಗುವುದು.

20–3–86 ರಲ್ಲಿ ಹೈದರಾಬಾದಿನಲ್ಲಿ ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್ ಅವರ ಅಧ್ಯಕ್ಷತೆಯಲ್ಲಿ ಸೇರಿದ ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳ ಬಗ್ಗೆ ತಿಳಿಸುತ್ತ ಕಾರ್ಯನಿರ್ವಹಣಾಧಿಕಾರಿ–20" ಪರದೆಯ ಟಿ. ವಿ ಗಳನ್ನು 25 ಲಕ್ಷ ರೂಗಳ ವೆಚ್ಚದಲ್ಲಿ ಒದಗಿಸಲಾಗುವುದು ಎಂದು ತಿಳಿಸುತ್ತ 'ಸದಸ್ ಹಾಲಿನಲ್ಲಿ ಒಂದು ಸ್ಥಿರ ಕ್ಯಾಮರಾವನ್ನೂ, ವಿವಿಧ ಆರ್ಜಿತ ಸೇವೆಗಳ ದೂರದರ್ಶನ ಪ್ರಸಾರಕ್ಕಾಗಿ ಒಂದು ಚಲ ಕ್ಯಾಮರಾವನ್ನೂ ಏರ್ಪಾಡು ಮಾಡಲಾಗುವುದು' ಎಂದರು. (ಇದರಿಂದಾಗಿ ಸರತಿಯ ಸಾಲಿನಲ್ಲಿ ಸ್ವಾಮಿದರ್ಶನಕ್ಕಾಗಿ ಕಾದು ಕುಳಿತವರಿಗೆ ಕಾಯುವಿಕೆಯ ಬೇಸರ ನೀಗುತ್ತದೆ.) ಈ ಕೆಲಸವನ್ನು ಹೈದರಾಬಾದಿನ ಇ. ಸಿ. ಐ. ಎಲ್ ಸಂಸ್ಥೆಗೆ ಒಪ್ಪಿಸಲಾಗುವುದು. ತಿರುಮಲೆಯಿಂದ ಅಲಿಪಿರಿಯವರೆಗೆ ಬೇರೆಯಾದ ತಂತಿ ಸಂಪರ್ಕದಿಂದ ಭಕ್ತಿಕಾರ್ಯಕ್ರಮಗಳ ಪ್ರಸಾರಕ್ಕಾಗಿ 7. 75 ಲಕ್ಷರೂಗಳನ್ನು ವೆಚ್ಚ ಮಾಡಲು ತೀರ್ಮಾನಿಸಲಾಯಿತು.

ತಿರುಮಲೆಯ ಸ್ವಾಮಿಪುಷ್ಕರಿಣಿಯ ನೀರನ್ನು ಶುದ್ಧಗೊಳಿಸುವ ಕ್ರಮದಲ್ಲಿ ಡಾ॥ ಬಿ. ಎಸ್. ಸುಂದರೇಶನ್, ಶ್ರೀ ಕೃಪಾರಾವ್, ಡಾ॥ ವೈ. ಎಸ್. ಮೂರ್ತಿ ಮುಂತಾದ ತಜ್ಞರ ಸಲಹೆಗಳ ನಂತರ 74. 5 ಲಕ್ಷರೂಗಳ ಅಂದಾಜು ವೆಚ್ಚದಲ್ಲಿ ಆ ಕಾರ್ಯವನ್ನು ಭಾರತ ಸರಕಾರದ ಸ್ವಾಮ್ಯದ ಮೆ॥ ರಿಚರ್ಡ್‌ಸನ್ ಅಂಡ್ ಕ್ರಡ್ಸ್ ಲಿಮಿಟೆಡ್‌ಗೆ ನೀಡಲು ತೀರ್ಮಾನಿಸಲಾಯಿತು.

ಭಾರತೀಯ ತೈಲ ನಿಗಮದ ಸಲಹೆಗಳಂತೆ ಅಡಿಗೆ ಅನಿಲ ಸೋರುವಿಕೆಯನ್ನು ತಡೆಯಲು ಸೂಕ್ತಕ್ರಮ ಕೈಗೊಳ್ಳಲು ತೀರ್ಮಾನಿಸಲಾಯಿತು.

1986 ರ ಏಪ್ರಿಲ್ ತಿಂಗಳಿನಲ್ಲಿ ಅನ್ನಮಾಚಾರ್ಯ ವರ್ಧಂತಿಯನ್ನು 45 ಸಹಸ್ರ ರೂಗಳಲ್ಲಿ ಹಾಗೂ ಮೇ ತಿಂಗಳಿನಲ್ಲಿ ಅನ್ನಮಾಚಾರ್ಯ ಜಯಂತಿಯನ್ನು 2. 5 ಲಕ್ಷರೂಗಳಲ್ಲಿ ನಡೆಸಲು ತೀರ್ಮಾನಿಸಲಾಯಿತು.

ಬೇಸಗೆಯ ದಿನಗಳಲ್ಲಿ ಅಲಿಪಿರಿಯಿಂದ ಕಾಲುಹಾದಿಯಲ್ಲಿ ಬೆಟ್ಟಕ್ಕೇರುವ ಹಾದಿಯಲ್ಲಿ ಯಾತ್ರಿಕರಿಗೆ ಮಜ್ಜಿಗೆಯನ್ನು ನೀಡಲು ತೀರ್ಮಾನಿಸಲಾಯಿತು.

ನಿತ್ಯಾನ್ನದಾನ ಯೋಜನೆಯಲ್ಲಿ ಈವರೆಗೆ ನೀಡುತ್ತಿದ್ದ ಆಹಾರದೊಡನೆ ಪಲ್ಯವನ್ನೂ ನೀಡಲು ಹಾಗೂ ಪ್ರತಿದಿನವೂ ಭೋಜನವನ್ನು 5000 ಮಂದಿಯಿಂದ 10,000 ಮಂದಿಗೆ ಏರಿಸಲೂ ತೀರ್ಮಾನಿಸಲಾಯಿತು.

## ಮಚಲೀಪಟ್ಟಣದಲ್ಲಿ ತಿ. ತಿ. ದೇ. ಕಲ್ಯಾಣಮಂಟಪ

ತಿ. ತಿ. ದೇ. ಕಲ್ಯಾಣಮಂಟಪವನ್ನು 20 ಲಕ್ಷ ರೂಗಳ ವೆಚ್ಚದಲ್ಲಿ ಮಚಲೀಪಟ್ಟಣದಲ್ಲಿ ನಿರ್ಮಿಸಲಾಗಿದ್ದು, ಈಚೆಗೆ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾಯರು ಇದರ ಉದ್ಘಾಟನೆಯನ್ನು ನಡೆಸಿದರು.

ಕಲ್ಯಾಣ ಮಂಟಪವನ್ನು ಉದ್ಘಾಟಿಸುತ್ತ ಮುಖ್ಯಮಂತ್ರಿಗಳು ಆಂಧ್ರಪ್ರದೇಶದ ಎಲ್ಲ ಮಂಡಲ ಕೇಂದ್ರಗಳಲ್ಲೂ ಕಲ್ಯಾಣಮಂಟಪಗಳನ್ನು ನಿರ್ಮಿಸಲಾಗುವುದು ಎಂದು ವಿವರಿಸಿದರು. ತಿ. ತಿ. ದೇ. ಧನವನ್ನು ಸರ್ಕಾರಿ ಖಜಾನೆಯಲ್ಲಿ ಠೇವಣಿಯಾಗಿಡುವುದರಿಂದ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಒತ್ತಾಸೆಯಾಗುತ್ತದೆಯೆಂದೂ ಅವರು ವಿವರಿಸಿದರು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಮಾತನಾಡುತ್ತ ಆಂಧ್ರದಲ್ಲಿ ಈಗಾಗಲೇ 20 ತಿ. ತಿ. ದೇ. ಕಲ್ಯಾಣಮಂಟಪಗಳಿರುವುದಾಗಿಯೂ ಮತ್ತೂ ಹತ್ತು ಕಲ್ಯಾಣ ಮಂಟಪಗಳು ನಿರ್ಮಾಣದ ವಿವಿಧ ಹಂತಗಳಲ್ಲಿರುವುದಾಗಿಯೂ ತಿಳಿಸುತ್ತ ಕಾಕಿನಾಡ, ತಣುಕು, ಗುಡಿವಾಡಗಳಲ್ಲಿನ ಕಲ್ಯಾಣ ಮಂಟಪಗಳು ಇನ್ನು ಮೂರು ತಿಂಗಳಲ್ಲಿ ಪೂರ್ಣವಾಗುವುವೆಂದೂ ತಿಳಿಸಿದರು.

# ವಾರ್ತಾಲಹರಿ

ತಿ. ತಿ. ದೇ. ಕಲ್ಯಾಣ ಮಂಟಪಗಳಲ್ಲಿ ಸಾಮೂಹಿಕ ವಿವಾಹಗಳಿಗೆ ಎಲ್ಲ ಸೌಲಭ್ಯಗಳನ್ನೂ ಉಚಿತವಾಗಿ ಒದಗಿಸಲಾಗುವುದೆಂದೂ ಅವರು ತಿಳಿಸಿದರು.

ಆಂಧ್ರಪ್ರದೇಶದ ಮಂತ್ರಿಗಳಾದ ಶ್ರೀ ವಸಂತ ನಾಗೇಶ್ವರರಾವ್, ಶ್ರೀ ಜನಾರೆಡ್ಡಿ, ಶ್ರೀ ಎನ್. ಯತಿರಾಜಾರಾಯರೂ ಭಾಗವಹಿಸಿದ್ದ ಉದ್ಘಾಟನಾ ಸಭೆಗೆ ಬಂದರಿನ ಎಂ. ಎಲ್. ಎ. ಶ್ರೀ ವಿ. ರಂಗರಾವ್ ಅವರು ಅಧ್ಯಕ್ಷತೆ ವಹಿಸಿದ್ದರು.

## ತಿ. ತಿ. ದೇ. ಗಳಿಗೆ ಮುಖ್ಯ ಇಂಜನೀಯರ್ ನೇಮಕಾತಿ

ತಿರುಮಲೆ ತಿರುಪತಿ ದೇವಸ್ಥಾನಗಳ ಮುಖ್ಯ ಇಂಜನೀಯರ್ ಆಗಿ ಶ್ರೀ ಎಂ. ಪ್ರಕಾಶರಾವ್ ಅವರನ್ನು ಆಂಧ್ರಪ್ರದೇಶ ಸರಕಾರ ನಿಯಮಿಸಿದೆ.

ಅವರು ಇನ್ನು ಮುಂದೆ ತಿ. ತಿ. ದೇ. ಗಳ ಎಲ್ಲ ಸಾಮಾನ್ಯಕಾಮಗಾರಿಗಳ ಹೊಣೆ ಹೊರುವರಾದರೆ, ಈವರೆಗೆ ಚೀಫ್ ಇಂಜನೀಯರ್ ಆಗಿದ್ದ ಶ್ರೀ ರಂಗರಾಜು ಅವರು ದೇವಾಲಯ ಕಾಮಗಾರಿ ಹೊಣೆಯನ್ನು ನೋಡುವರು.



ಕಲ್ಯಾಣ ಮಂಟಪದ ಉದ್ಘಾಟನಾ ಸಭೆಯಲ್ಲಿ ಮಾತನಾಡುತ್ತ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್.



ಶ್ರೀಮತಿ ಕುಮುದ್‌ಬೆನ್‌ಜೋಷಿಯವರಿಗೆ ತಿ. ತಿ. ದೇ. ಧಾರ್ಮಿಕ ಕೃತಿಗಳನ್ನು ಬಹೂಕರಿಸುತ್ತಿರುವ ತಿ.ತಿ.ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಅವರು.

## ಶ್ರೀ ವೆಂಕಟೇಶ್ವರಸ್ವಾಮಿ ಸೇವೆಯಲ್ಲಿ ಗವರ್ನರ್ ಶ್ರೀಮತಿ ಕುಮುದ್‌ಬೆನ್ ಜೋಷಿ

ಆಂಧ್ರಪ್ರದೇಶದ ಗವರ್ನರ್ ಶ್ರೀಮತಿ ಕುಮುದ್ ಬೆನ್‌ಜೋಷಿ ಅವರು ಇದೇ ಮಾರ್ಚ್ 21 ರಂದು ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿ, ಬೆಳಗ್ಗೆ 4-30 ಗಂಟೆಗೆ ಸ್ವಾಮಿ ಅಭಿಷೇಕದಲ್ಲಿ ಪಾಲುಗೊಂಡರು.

ಬೆಳಗ್ಗೆ ಶಾಸ್ತ್ರೋಕ್ತವಾಗಿ ಅವರನ್ನು ಸ್ವಾಗತಿಸಲಾಯಿತು. ಪತ್ರಕರ್ತರೊಂದಿಗೆ ಮಾತನಾಡುತ್ತ ತಮಗೆ ದೇವರ ಬಗ್ಗೆ ಭಕ್ತಿಯಿದ್ದರೂ ಅನೇಕ ಕಾರ್ಯಗಳ ಒತ್ತಡದಿಂದಾಗಿ ಈವರೆಗೆ ದೇವಾಲಯಕ್ಕೆ ಬರಲಾಗಲಿಲ್ಲವೆಂದು ತಿಳಿಸಿದರು. ಅವರಿಗೆ ಅಭಿಷೇಕಾನಂತರ ಸ್ವಾಮಿಯ ಶೇಷವಸ್ತ್ರವನ್ನು ನೀಡಿ ಸನ್ಮಾನಿಸಲಾಯಿತು. ಹೊಸ ವಜ್ರಕಿರೀಟವನ್ನೂ ಆಕೆ ನೋಡಿದರು. ಸ್ವಾಮಿ ದರ್ಶನಾನಂತರ ಶ್ರೀಮತಿ ಜೋಷಿಯವರು ತಿರುಮಲೆಯ ಬೆಟ್ಟಗಳಲ್ಲಿ 2 ಗಂಟೆಗಳ ಕಾಲ ಓಡಾಡಿ ಪ್ರಾಗೈತಿಹಾಸಿಕ ಸಹಜ ಶಿಲಾತೋರಣವನ್ನೂ, ಪಾಪನಾಶಿನಿ, ನರ್ಸರಿಗಾರ್ಡನ್ಸ್‌ಗಳನ್ನು ಸಂದರ್ಶಿಸಿ, ಅರಣ್ಯಾಭಿವೃದ್ಧಿಯಲ್ಲಿ ತಿ. ತಿ. ದೇ. ತೊಡಗಿಸಿಕೊಳ್ಳಬೇಕೆಂದೂ, ಅದರಿಂದ ಸ್ವಾಮಿಗೂ ಸಂತಸವಾಗುವುದೆಂದೂ ನುಡಿದರು. ಅವರಿಗೆ ತಿ. ತಿ. ದೇ. ಧಾರ್ಮಿಕ ಗ್ರಂಥಗಳನ್ನು ನೀಡಲಾಯಿತು. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಚಕ್ರಧರರಾವ್, ಅರಣ್ಯಾಧಿಕಾರಿ ಶ್ರೀ ರಾಜಶೇಖರ ರೆಡ್ಡಿ ಮೊದಲಾದವರು ಆಕೆಗೆ ತಿರುಮಲೆ ಹಾಗೂ ಪರಿಸರದ ಪರಿಚಯ ಮಾಡಿಕೊಟ್ಟರು. (ಚಿತ್ರಗಳಿಗಾಗಿ ರಕ್ಷಾಪುಟದ ಒಳಗಡೆ ನೋಡಿ).



## ಹೊಸ ಕಲ್ಯಾಣ ಮಂಟಪ ಉದ್ಘಾಟನೆ

ಗಣಪವರಂನ ಬಳಿಯ ಸರಿಪಲ್ಲಿಯಲ್ಲಿ 32 ೬ ರೂಗಳ ವೆಚ್ಚದ ಕಲ್ಯಾಣ ಮಂಟಪವನ್ನ ಉದ್ಘಾಟಿಸಿದ ಆಂಧ್ರಪ್ರದೇಶದ ಮುಖ್ಯಮಂ ಶ್ರೀ ಎನ್. ಟಿ. ರಾಮಾರಾಯರು ತಿ. ತಿ. ದೇ ಧನವನ್ನು ಕಲ್ಯಾಣಮಂಟಪ ನಿರ್ಮಾಣ ಬಳಸುವುದನ್ನು ಹಾಗೂ ಇತರ ಅಭಿವೃ ಕಾರ್ಯಗಳಿಗೆ ಬಳಸುವುದನ್ನು ಸಮರ್ಥಿಸಿದರ

ಇಲ್ಲಿಯೇ ಒಂದು ವೇದ ಪಾಠಶಾಲೆ ಆರಂಭೋತ್ಸವವನ್ನೂ ಮಾಡಿದ ಶ್ರೀಯುತ ಈ ಶಾಲೆಯು ವೇದಗಳನ್ನು ಸಂರಕ್ಷಿಸಿ, ಪ್ರಸಾ ಮಾಡುವಂತಾಗಲಿ ಎಂದು ಹಾರೈಸಿದರು.

ಆಂಧ್ರಪ್ರದೇಶದ ದೇವಾದಾಯ ಶಾಖ ಮಾತ್ಯ ಶ್ರೀ ಯತಿರಾಜಾರಾಯರೂ ಹಾಜರಿ ಈ ಉದ್ಘಾಟನಾ ಕಾರ್ಯಕ್ರಮದಲ್ಲಿ ಮುಖ ಮಂತ್ರಿಯನ್ನೂ ಬೋರ್ಡ್ ಅಧ್ಯಕ್ಷ ಶ್ರೀ ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರನ್ನು ಪೂರ್ಣಕುಂಭದೊಡನೆ ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾ ಯಣ ಹಾಗೂ ವೇದಪಂಡಿತರು ಸ್ವಾಗತಿಸಿದರ (ಚಿತ್ರಗಳಿಗಾಗಿ ರಕ್ಷಾಪುಟದ ಒಳಗಡೆ ನೋಡಿ

## ಬೆಂಗಳೂರಿನಲ್ಲಿ ಗೀತಾ ಸ್ಪರ್ಧೆಗಳ

ದಿನಾಂಕ 22-12-85 ರಂದು ತಿ. ತಿ. ದೇ ಹಿಂದೂ ಧರ್ಮರಕ್ಷಣ ಸಂಸ್ಥೆಯು ಬೆಂಗಳೂರಿ ಪ್ರಾರ್ಥನಾ ಮಂದಿರದಲ್ಲಿ ಗೀತಾಜಯಂತಿ ಸ್ಪರ್ಧೆ ಗಳು ನಡೆದವು. ಸುಮಾರು 60 ಕ್ಕೂ ಮಿಗಿಲಾ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಪಾಲುಗೊಂಡರು ಈ ಸ್ಪರ್ಧೆಗಳಲ್ಲಿ ಸರ್ವಶ್ರೀ ಮೋಹನ (ಸಂಚಾ ಕರು) ಮಾಸ್ತರಭಟ್, ವೇಣುಗೋಪಾಲ ಇವ ಗಳು ತೀರ್ಪುಗಾರರಾಗಿದ್ದರು. ಸ್ಪರ್ಧೆಯನ್ನು ನಡೆಸಿಕೊಟ್ಟು, ಬಹುಮಾನ ವಿತರಣೆ ಮಾಡಿ ತಿ. ತಿ. ದೇ. ಪೌರಸಂಬಂಧಶಾಖಾಧಿಕಾರಿ ಡಾ ರಾವುಲ ಸೂರ್ಯನಾರಾಯಣ ಮೂರ್ತಿ ಯವ 'ಜೀವನದಲ್ಲಿ ಯಾವರೀತಿ ನಡೆದು ಕೊಳ್ಳಬೇಕ ಎಂಬುದಕ್ಕಾಗಿ ಶ್ರೀ ಕೃಷ್ಣಪರಮಾತ್ಮನು ನೀ ರುವ ಗೈಡ್-ಗೀತೆ' ಎಂದು ತಿಳಿಸಿದರು. ಗೀ ಯನ್ನು ಅನುದಿನ ಪಾರಾಯಣ ಮಾಡುವ ಅಗತ್ಯ ವನ್ನು ಅವಧಾರಿಸಿ ನುಡಿದರು.

ಸಭೆಯಲ್ಲಿ ಸರ್ವಶ್ರೀ ವಿ. ಆರ್. ನಾಯುಡು ಶ್ರೀನಿವಾಸನ್ ಮೊದಲಾದ ಗಣ್ಯರು ಭಾಗವಹಿ ಸಿದ್ದರು. ಸಂಚಾಲಕರಾದ ಶ್ರೀ ಮೋಹನ ಅವರಿಂದ ಸ್ವಾಗತ ವಂದನಾರ್ಪಣೆಗಳಾದವು.

## ಅಷ್ಟದಳ ಪದ್ಮಾರಾಧನೆ

ತಿರುಮಲೆಯ ದೇವಾಲಯದಲ್ಲಿ 'ಅಷ್ಟದಳ ಪದ್ಮಾರಾಧನೆ'–ಎಂಬ ಹೊಸ ಆರ್ಜಿತ ಸೇವೆಯನ್ನು ಆರಂಭಿಸಿಲಾಗಿದೆ.

ಪ್ರತಿ ಮಂಗಳವಾರ ಎರಡನೇ ಅರ್ಚನೆಯಾದ ಮೇಲೆ ಹದಿನೈದು ನಿಮಿಷಗಳಕಾಲ ಶ್ರೀ ವೆಂಕಟೇಶ್ವರ ಸ್ವಾಮಿಗೆ 108 ಬಂಗಾರದ ಕಮಲಗಳಿಂದ ಈ ಸೇವೆಯನ್ನು ನಡೆಸಲಾಗುವುದು. ಗೃಹಸ್ಥರು 5116 ರೂಗಳ ಶುಲ್ಕ ನೀಡುವುದರಿಂದ ಈ ಸೇವೆಯನ್ನು ನಡೆಸಬಹುದು. ಗೃಹಸ್ಥರನ್ನೂ ಸೇರಿಸಿದಂತೆ ಐದುಮಂದಿಯನ್ನು ಈ ಸೇವಾದರ್ಶನಕ್ಕಾಗಿ ಅನುಮತಿಸಲಾಗುವುದು. 5 ಗ್ರಾಂ ತೂಕದ ಬಂಗಾರದ ಪದಕವನ್ನೂ, ಒಂದು ಶೇಷವಸ್ತ್ರವನ್ನೂ, ಒಂದು ಕುಪ್ಪಸದ ಕಣವನ್ನೂ ಹತ್ತು ದೊಡ್ಡ ಲಾಡು ಹಾಗೂ ಹತ್ತು ದೊಡ್ಡ ವಡೆಗಳನ್ನೂ ಬಹೂಕರಿಸಲಾಗುವುದು.

1984 ರ ಏಪ್ರಿಲ್‌ನಲ್ಲಿ ತಿ. ತಿ. ದೇ. ಆಡಳಿತದ ಸ್ವರ್ಣೋತ್ಸವಗಳಲ್ಲಿ ಈ ಹೊಸಸೇವೆಯನ್ನು ಆರಂಭಿಸಲು ತೀರ್ಮಾನಿಸಿದ್ದುದನ್ನು ಇಲ್ಲಿ ನೆನೆಯಬಹುದು. ಆ ನಂತರ ಹೈದರಾಬಾದಿನ 'ಮೀರಾ' ಎಂಬ ಭಕ್ತರೊಬ್ಬರು ಸ್ವಾಮಿಗೆ 2. 21 ಕಿಲೋ ತೂಕದ 108 ಬಂಗಾರದ ಕಮಲದ ಹೂಗಳನ್ನು (ಅಂದಾಜು ವೆಚ್ಚ 4. 28 ಲಕ್ಷ ರೂ) ಸಮರ್ಪಿಸಿದರು. ಇವುಗಳ ಮೇಲೆ ತಿ.ತಿ.ದೇ ಆಸ್ಥಾನ ಪಂಡಿತರ ಸಲಹೆಯಂತೆ ಅಷ್ಟೋತ್ತರ ನಾಮವನ್ನು ಬಿಡಿಸಲಾಗಿದೆ. ಇವುಗಳನ್ನು ಅಷ್ಟದಳ ಪದ್ಮಾರಾಧನೆಗೆ ಬಳಸಲಾಗುವುದು.

ಈ ವರೆಗೆ ಪ್ರತಿಮಂಗಳವಾರವೂ ಅಷ್ಟದಳ ಪದ್ಮಾರಾಧನೆ ನಡೆಯುತ್ತಿದ್ದರೂ ಅದನ್ನು ಆರ್ಜಿತ ಸೇವೆಯಾಗಿ ಪ್ರವೇಶ ಪಡಿಸುತ್ತಿರುವ ಈ ಹೊತ್ತಿನಲ್ಲಿ, ಅದರ ದಾನಕರ್ತ ಶ್ರೀ 'ಮೀರಾ' ಅವರನ್ನು ವರ್ಷಕ್ಕೊಮ್ಮೆ ಹತ್ತು ಮಂದಿಯೊಂದಿಗೆ ಈ ಸೇವೆಯಲ್ಲಿ ಪಾಲ್ಗೊಳ್ಳುವ ಅವಕಾಶವನ್ನಿತ್ತು ಅವರನ್ನು ಶೇಷವಸ್ತ್ರದಿಂದ ಸನ್ಮಾನಿಸಬೇಕೆಂದು ತೀರ್ಮಾನಿಸಲಾಗಿದೆ. ಗಮನಿಸಬೇಕಾದ ಅಂಶವೆಂದರೆ ಈ ಭಕ್ತರು ಇಸ್ಲಾಂ ಧರ್ಮದಲ್ಲಿ ಹುಟ್ಟಿದವರು.

## ಹಿಂದೂ ಧರ್ಮ ಪ್ರಸಾರ ಯೋಜನೆ

ನೆಲ್ಲೂರು ಜಿಲ್ಲೆಯ ಕೋದಾಡ ಗ್ರಾಮದಲ್ಲಿ ಏಪ್ರಿಲ್ ನಾಲ್ಕರಿಂದ ಸನಾತನ ಧರ್ಮದ ಮೂಲ ತತ್ತ್ವಗಳ ಪ್ರಸಾರ ಯೋಜನೆಯು ಆರಂಭವಾಗಲಿದೆ.

ತಿ. ತಿ. ದೇ. ಗಳ ಹಿಂದೂ ಧರ್ಮರಕ್ಷಣ ಸಂಸ್ಥೆಯ ವತಿಯಿಂದ ಆಯ್ದ ಸ್ಥಳಗಳಲ್ಲಿ ನಡೆಯುವ ಯೋಜನೆಯನ್ನು ಮೊದಲಿಗೆ ಕೋದಾಡದಲ್ಲಿ ಆರುತಿಂಗಳ ಕಾಲ ನಡೆಸಲು ಯೋಜಿಸಲಾಗಿದೆ.

ಏರ್ಪೇಡು ಶ್ರೀ ವ್ಯಾಸಾಶ್ರಮದ ಆಶ್ರಮದ ಶ್ರೀ ಶ್ರೀ ವಿದ್ಯಾನಂದಗಿರಿ ಸ್ವಾಮಿಗಳು ತಿ. ತಿ. ದೇ. ಗಳ ಅಭ್ಯರ್ಥನೆಯಂತೆ ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರಲು ಒಪ್ಪಿದ್ದಾರೆ. ಅವರ ಮಾರ್ಗದರ್ಶನದಲ್ಲಿ ಕಾರಂಜೇಡುವಿನ ಶ್ರೀಶ್ರೀ ಪ್ರಣವಾನಂದ ಸ್ವಾಮಿಗಳು ಕಲಾವಿದರು, ವಿದ್ವಾಂಸರು ಮತ್ತಿತರರ ನೆರವಿನಿಂದ ಭಜನೆ, ಧಾರ್ಮಿಕ ಉಪನ್ಯಾಸ, ಗೀತಾಪಾರಾಯಣ, ಹರಿಕಥೆ, ಧಾರ್ಮಿಕ ಸಾಂಸ್ಕೃತಿಕ ಚಿತ್ರಪ್ರದರ್ಶನ ಮುಂತಾದುವನ್ನು ಕೈಗೊಳ್ಳಲಿದ್ದಾರೆ.

ಉದ್ಘಾಟನಾ ಸಭೆಯನ್ನು ಶ್ರೀ ಶ್ರೀ ವಿದ್ಯಾನಂದಗಿರಿ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ನಡೆಸಲಾಗುವುದು. ಹಲವಾರು ಪ್ರಮುಖರು ಭಾಗವಹಿಸುವರು. ಕಂಚಿ ಕಾಮಕೋಟಿ ಪೀಠದ ಶ್ರೀ ಶ್ರೀ ಚಂದ್ರಶೇಖರ ಸರಸ್ವತಿ ಸ್ವಾಮಿಗಳು ಹಾಗೂ ಶೃಂಗೇರಿಯ ಶ್ರೀಶ್ರೀ ವಿದ್ಯಾತೀರ್ಥಸ್ವಾಮಿಯವರು ತಿ. ತಿ. ದೇ. ಗಳ ಪ್ರಾರ್ಥನೆಯಂತೆ ಮಾನವತೆಯ ಉದ್ಧಾರಕ್ಕಾಗಿ ಒಂದು ಸಂದೇಶವನ್ನು ನೀಡಿದ್ದಾರೆ. ಬೆಳಗಿನಲ್ಲಿ ನಾರಾಯಣಾಯನಮಃ ಎಂಬ ಹಾಗೂ ಸಂಜೆಯಲ್ಲಿ ಶಿವಾಯನಮಃ ಎಂಬ ಅನುಷ್ಠಾನ ಮಂತ್ರಗಳನ್ನು ಇದು ಒಳಗೊಂಡಿದೆ.

## ಶ್ರೀ ಜಲಕಂಠೇಶ್ವರಸ್ವಾಮಿ ಪುನಃ ಪ್ರತಿಷ್ಠಾಪನೆ

ಕೋಲಾರದ ಶತಶೃಂಗಪರ್ವತದ ತಪ್ಪಲಿನಲ್ಲಿ ಜೀರ್ಣವಾಗಿದ್ದ ಶ್ರೀ ಜಲಕಂಠೇಶ್ವರಸ್ವಾಮಿ ವಿಗ್ರಹವನ್ನು ಪುನಃ ಪ್ರತಿಷ್ಠಾಪಿಸಲಾಯಿತು.

15–3–86 ರಿಂದ ಮೂರುದಿನ ನಡೆದ ಈ ಪುನಃ ಪ್ರತಿಷ್ಠಾ ಕಾರ್ಯಕ್ರಮ ತೀರ್ಥಮೃತ್ ಸಂಗ್ರಹಣ, ಮಹಾಗಣಪತಿ ಪೂಜೆ, ರಕ್ಷಾಬಂಧನ ಅಂಕುರಾರ್ಪಣೆ, ವಾಸ್ತು ಪೂಜೆಗಳಲ್ಲಿ ಆರಂಭವಾಗಿ



ಜಲಕಂಠೇಶ್ವರಸ್ವಾಮಿ — ಚಿತ್ರ – 'ಗುರು'

ಕಲಶಸ್ಥಾಪನೆ, ಅಗ್ನಿಪ್ರತಿಷ್ಠೆ, ಜಲಾಧಿವಾಸ, ಕ್ಷೀರಾಧಿವಾಸಗಳಲ್ಲಿ ಮುಂದುವರೆದು ಭಾನುವಾರದ ರಾತ್ರಿ ಪುನಃಪ್ರತಿಷ್ಠಾಪನೆಯಲ್ಲಿ ಒಂದು ಘಟ್ಟಕ್ಕೆ ಬಂದಿತು.

17–3–86 ರಂದು ಬೆಳಗ್ಗೆ ನಡೆದ ವಿಶೇಷ ಕಾರ್ಯಕ್ರಮದಲ್ಲಿ ಬೆಂಗಳೂರಿನ ಬೇಲಿ ಮಠದ ಶ್ರೀಶ್ರೀ ಶಿವರುದ್ರ ಮಹಾಸ್ವಾಮಿಗಳೂ, ಸಂಪಿಗೆ ಮಠದ ಶ್ರೀ ಶ್ರೀ ಶಿವಬೀರೇಂದ್ರ ಸ್ವಾಮೀಜೀಯವರೂ ಆಶೀರ್ವಚನ ನೀಡಿದರು. ವಿಶೇಷ ಜಿಲ್ಲಾಧಿಕಾರಿ ಹಾಗೂ ಮುಜರಾಯಿ ಅಧಿಕಾರಿ ಶ್ರೀ ಸಿ. ಎನ್. ಸೀತಾರಾಮ್ ಅವರು ಅಧ್ಯಕ್ಷತೆ ವಹಿಸಿದ್ದರು.

ಮೂರುದಿನವೂ ಸಂಜೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಶ್ರೀ ಮು. ಕೃಷ್ಣಪ್ಪ–ಕೊಳಲು (ತನಿ) ಶ್ರೀ ಬಾಲಾಜಿ ಸಿಂಗ್ ಸಂಗೀತ, ಅರುಣಕುಮಾರರ ಶಿಷ್ಯರಿಂದ ಶಿವಕಥೆ, (ಗಿರಿಜಾಕಲ್ಯಾಣ) ಪ್ರಚಾರ ಇಲಾಖೆಯ ವತಿಯಿಂದ ಚಿತ್ರಪ್ರದರ್ಶನ ಮೊದಲಾದವು ಏರ್ಪಾಡಾಗಿದ್ದವು.

ಜೀರ್ಣೋದ್ಧಾರ ಸಮಿತಿಯ ಅಧ್ಯಕ್ಷ ಶ್ರೀ ಬಿ. ಪಿ. ಸತ್ಯನಾರಾಯಣ ಮೂರ್ತಿ ಅವರಿಂದ ಸ್ವಾಗತ, ಸಮಿತಿಯ ಕಾರ್ಯದರ್ಶಿ ಶ್ರೀ ಎಂ. ಶ್ರೀನಿವಾಸ ಅವರಿಂದ ವಂದನಾರ್ಪಣೆ ನಡೆದವು.

ಮೂರುದಿನವೂ, ಆದಕ್ಕೆ ಮೊದಲೂ ಸಮಿತಿಗೆ ಸಲಹೆಗಾರರಾಗಿ ಪ್ರೇರಕರಾಗಿ ಶ್ರೀ ಶ್ರೀ ಸ್ವಾಮಿ ಹರಿಹರಾನಂದ ಸರಸ್ವತಿಗಳು ಶ್ರೀ ಪಾರ್ಥಸಾರಥಿಯವರು ಉತ್ಸಾಹದ ಸೆಲೆಯಾಗಿದ್ದರು.

ಮುಂದಿನ ಸಂಚಿಕೆಯಲ್ಲಿ .... .... ....

ಸಪ್ತಗಿರಿ. ಮೇ — 1986

ಪರಿಶೇಷಾಚಾರ್ಯರ ಶ್ರೀನಿವಾಸ ಕಲ್ಯಾಣ
– ಟಿ.ಎಸ್. ಪದ್ಮನಾಭರಾವ್

ಪ್ರಾಚೀನ ಕರ್ನಾಟಕದ ಸಂಸ್ಕೃತಿ
– ಡಾ॥ ಎಸ್. ಅನಂತರಂಗಾಚಾರ್

ತಿರುವಾಯ್ಮೊಳಿ
– ಡಿ. ಕೃಷ್ಣೈಯಂಗಾರ್

ತುಲಸೀದಾಸರು
– ವಿದ್ವಾನ್ ಬ.ನ. ಗುಂಡೂರಾವ್

ಬಡತನ
– ಮತ್ತೀಗೆರೆ ಅನಂತು

ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.

ನಿಮ್ಮ ಪ್ರತಿಯನ್ನು ಕಾಯ್ದಿರಿಸಿ. ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯ ದಿನಗಳು

## ಮೇ 1986

| | | |
|---|---|---|
| 4. | ಭಾನುವಾರ | ಶ್ರೀ ಭಾಷ್ಯಕಾರ ಉತ್ಸವಾರಂಭ |
| 6. | ಮಂಗಳವಾರ | ತಿರುಪತಿ ಗಂಗಾಜಾತ್ರೆ ಆರಂಭ |
| 11. | ಭಾನುವಾರ | ಪರಶುರಾಮ ಜಯಂತಿ |
| 13. | ಮಂಗಳವಾರ | ಶ್ರೀ ಭಾಷ್ಯಕಾರರ ಶಾತ್ತುಮೊರೆ, ಗಂಗಾಜಾತ್ರೆ ಸಮಾಪ್ತಿ |
| 14. | ಬುಧವಾರ | ಶ್ರೀ ಶಂಕರಾಚಾರ್ಯ ಜಯಂತಿ, ನಮ್ಮಾಳ್ವಾರ್ ಉತ್ಸವಾರಂಭ |
| 15. | ಗುರುವಾರ | ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವಾರಂಭ |
| 20. | ಮಂಗಳವಾರ | ಶ್ರೀ ಗೋವಿಂದರಾಜಸ್ವಾಮಿ ಗರುಡೋತ್ಸವ, ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ |
| 22. | ಗುರುವಾರ | ನರಸಿಂಹಜಯಂತಿ |
| 23. | ಶುಕ್ರವಾರ | ಕೂರ್ಮ ಜಯಂತಿ ನಮ್ಮಾಳ್ವಾರ್ ಶಾತ್ತುಮೊರೆ ಶ್ರೀ ಗೋವಿಂದರಾಜಸ್ವಾಮಿ ರಥೋತ್ಸವ |
| 25. | ಭಾನುವಾರ | ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 28. | ಬುಧವಾರ | ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ರಥೋತ್ಸವ. |

## ವಿಜ್ಞಾನ ಗೈರ್ವಾಣೀ ಪ್ರದರ್ಶಿ

ಸಂಸ್ಕೃತವು ಸಾಹಿತ್ಯ, ತತ್ತ್ವಶಾಸ್ತ್ರ, ವೇದಾ ಗಳಿಗಷ್ಟೇ ಅಲ್ಲದೆ ಖಗೋಲ, ವೈದ್ಯ, ಗ ಮೊದಲಾದ ವಿಜ್ಞಾನ ಸಾಹಿತ್ಯಗಳಿಗೂ ಉತ್ತ ಅಭಿವ್ಯಕ್ತಿ ಮಾಧ್ಯಮವಾಗಿದ್ದಿತು ಎಂಬಂಶವ ವಿಶೇಷ ಹಾಗೂ ಆಕರ್ಷಣೀಯ ಚಿತ್ರಪಟ ಮೂಲಕ ಸಾಮಾನ್ಯರಿಗೂ ತಿಳಿಯುವಂತೆ ವಿ ಸುವ ವಿಜ್ಞಾನ ಗೈರ್ವಾಣೀ ಪ್ರದರ್ಶಿನಿ ಕೋಲಾರದ ಜೈನ ಮಂದಿರದಲ್ಲಿ ನಡೆದು ಅಪ ಜನ ಮನ್ನಣೆಯನ್ನು ಪಡೆಯಿತು.

ದಶಮಾಂಶ, ಘಾತ, ಮೊದಲಾದ ಬೀಜಗ ಕ್ಷೇತ್ರಗಳೇ ಅಲ್ಲದೆ ಪೈಥಾಗೊರಸ್‌ನದು ಎಂ ಕರೆಯಲಾಗುವ ಲಂಬಕೋನ ತ್ರಿಭುಜದ ಕ ಚೌಕ ಉಳಿದೆರಡು ಚೌಕಗಳ ಮೊತ್ತಕ್ಕೆ ಸ ವೆಂಬ ಜ್ಯಾಮಿತಿಯ ಬೋಧಾಯನ ಸೂ ವನ್ನೂ ವಿವರಿಸಿ, ಪ್ರಾಚೀನ ಭಾರತದಲ್ಲಿ ಮೆದು ಕರುಳಿನ ಶಸ್ತ್ರಚಿಕಿತ್ಸಾ ವಿಧಾನವನ್ನು ವಿವ ಕೊಡನೆ ನೀಡುವ ಚಿತ್ರಗಳು ನಿಂತು ನೋಡುವ ಮಾಡಿದವು.

ಸ್ಥಳೀಯ ಸಂಸ್ಕೃತ ಸಂಘದ ಎಂಟನೇವಾ ಕೋತ್ಸವದ ಅಂಗವಾಗಿ ನಡೆದ ಪ್ರದರ್ಶಿನಿಯ ಬಿ. ಇ. ಎಂ. ಎಲ್. ನ ಎ. ಎಸ್. ಪ್ರಸಾದ್ ಉದ್ಘಾಟಿಸಿದರು. ಶ್ರೀಶ್ರೀ ಹರಿಹರಾನಂದ ಸ್ವತಿ ಸ್ವಾಮಿಗಳು ಪ್ರಾಚೀನ ಋಷಿವಾ ಯೊಡನೆ ವಿಜ್ಞಾನ ಕಲೆ ಮೇಳವಿಸಿದಾಗ ಜ್ಞಾನನವನೀತವುಂಟಾಗುವುದೆಂದು ಹೇಳು 'ನಮ್ಮ ಪರಂಪರೆಯಲ್ಲಿನ ವಿಜ್ಞಾನವನ್ನು ಯಲು ಯುವಕರು ಮುಂದಾಗಬೇಕು' ಎಂ ಕರೆ ನೀಡಿದರು.

ಕಡೆಯಲ್ಲಿ ಧೀರೌ ಬಾಲಕೌ ಹಾಗೂ ನಿಷ್ಕಾ ಪ್ರೇಮ-ಎಂಬ ಎರಡು ಐತಿಹಾಸಿಕ ಪೌರಾಣ ರೂಪಕಗಳನ್ನು ಸಂಸ್ಕೃತದಲ್ಲಿ ಅಭಿನಯಿ ಲಾಯಿತು.



Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati - 517501.

